KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧, ೨೦೧೧, (ಭಾದ್ರಪದ ೧೦, ಶಕ ವರ್ಷ ೧೯೩೩) | ಸಂಚಿಕೆ ೩೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ರಾಜ್ಯದ ಎಲ್ಲಾ ತಾಲ್ಲೂಕಿನ ತಹಶೀಲ್ದಾರರ ಮತ್ತು ಸಹಾಯಕ ಆಯುಕ್ತರ ಕಾರ್ಯಾಲಯಗಳಲ್ಲಿ ಇರುವ ಶಿರಸ್ತೇದಾರರ ಹುದ್ದೆಯನ್ನು ತಹಶೀಲ್ದಾರ್ ಗ್ರೇಡ್–ಬಿ ಹುದ್ದೆಗೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :**
1. ಕಂದಾಯ ಇಲಾಖೆ ವೃಂದ ಪುನರ್‌ವಿಲೋಕನಾ ಸಮಿತಿ ಸಭೆ ನಡವಳಿಗಳು ದಿನಾಂಕ 29.10.2003.
2. ಕರ್ನಾಟಕ ರಾಜ್ಯ ಕಂದಾಯ ಇಲಾಖಾ ಶಿರಸ್ತೇದಾರರ/ಉಪ ತಹಶೀಲ್ದಾರರ ಸಂಘ, ದಾವಣಗೆರೆ ಇವರ ಅರ್ಜಿ ದಿನಾಂಕ 17–02–2010 ಮತ್ತು 06–07–2010.
3. ಪ್ರಾದೇಶಿಕ ಆಯುಕ್ತರು, ಬೆಂಗಳೂರು, ಗುಲ್ಬರ್ಗ, ಬೆಳಗಾವಿ ಹಾಗೂ ಮೈಸೂರು ಇವರ ಪತ್ರದ ದಿನಾಂಕ ಕ್ರಮವಾಗಿ 30–8–2010, 25–08–2007, 07–08–2010 ಹಾಗೂ 12–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ ಕರ್ನಾಟಕ ರಾಜ್ಯ ಕಂದಾಯ ಇಲಾಖಾ ಶಿರಸ್ತೇದಾರರ/ಉಪ ತಹಶೀಲ್ದಾರರ ಸಂಘ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ, ಕರ್ನಾಟಕ ರಾಜ್ಯದಲ್ಲಿ 1907 ಶಿರಸ್ತೇದಾರರು, ಕಂದಾಯ ಇಲಾಖೆ ವಿವಿಧ ಅಧೀನ ಕಾರ್ಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ ಎಂದು ತಿಳಿಸಲಾಗಿದೆ. ಶಿರಸ್ತೆದಾರ್ ವೃಂದದಿಂದ ಗ್ರೇಡ್ 'ಬಿ' ತಹಶೀಲ್ದಾರ್ ವೃಂದಕ್ಕೆ ಬಡ್ತಿ ಅವಕಾಶ ಕಲ್ಪಿಸುವ ನಿಯಮಾವಳಿ ಪ್ರಕಾರ ಶಿರಸ್ತೇದಾರರಿಗೆ 1:56 ಅನುಪಾತದಲ್ಲಿ ಲಭ್ಯವಾಗುತ್ತಿರುವುದರಿಂದ ಪ್ರಸ್ತುತ ಹುದ್ದೆಯಲ್ಲಿ ಸತತವಾಗಿ 25 ವರ್ಷಗಳ ಸೇವೆ ಸಲ್ಲಿಸಿದ್ದಾಗ್ಯೂ ಬಡ್ತಿ ಲಭ್ಯವಾಗುತ್ತಿಲ್ಲ ಎಂದು ಮನವಿಯಲ್ಲಿ ತಿಳಿಸಿರುತ್ತಾರೆ. ಕಂದಾಯ ಇಲಾಖೆ ತಾಲ್ಲುಕು ಮಟ್ಟದ ಕಚೇರಿಗಳಲ್ಲಿ ಹಾಗೂ ಉಪ ವಿಭಾಗದ ಮಟ್ಟದ ಉಪ ವಿಭಾಗಾಧಿಕಾರಿಗಳ ಕಚೇರಿಗಳಲ್ಲಿ ಮತ್ತು ಉಪ ವಿಭಾಗಾಧಿಕಾರಿ ಪತ್ರಾಂಕಿತ ಹುದ್ದೆಯಲ್ಲಿ ತಹಶೀಲ್ದಾರ್ ಮತ್ತು ಉಪ ವಿಭಾಗಾಧಿಕಾರಿ ಒಬ್ಬರೇ ಕಾರ್ಯನಿರ್ವಹಿಸುತ್ತಿದ್ದು, ಸರ್ಕಾರದ ಎಲ್ಲಾ ಯೋಜನೆಗಳನ್ನು ಅನುಷ್ಠಾನಗೊಳಿಸಲು ಕಾರ್ಯಗಾತ್ರ ಹೊಣೆ ಅಧಿಕವಾಗಿರುತ್ತದೆ ಎಂದು, ಆದ್ದರಿಂದ ತಹಶೀಲ್ದಾರ್ ಕಾರ್ಯಾಲಯದ ಒಂದು ಶಿರಸ್ತೇದಾರರ ಹುದ್ದೆ ಹಾಗೂ ಉಪ ವಿಭಾಗಾಧಿಕಾರಿಗಳ ವ್ಯವಸ್ಥಾಪಕರ/ಶಿರಸ್ತೇದಾರರ ಹುದ್ದೆಗಳನ್ನು ಗ್ರೇಡ್ 'ಬಿ' ತಹಶೀಲ್ದಾರರ ಹುದ್ದೆಗೆ ಉನ್ನತೀಕರಿಸಲು ವಿನಂತಿಸಿರುತ್ತಾರೆ.

ಪ್ರಸ್ತುತ ವಿಷಯವು ಮೇಲೆ ಓದಲಾದ ಕ್ರ.ಸಂ.(1)ರ ಕಂದಾಯ ಇಲಾಖೆಯಲ್ಲಿ ವೃಂದ ಪುನರಾವಲೋಕನ ಸಮಿತಿಯ ಸಭೆಯ ದಿನಾಂಕ 29–10–2003ರ ಸಭೆಯ ನಡವಳಿಕೆಯಲ್ಲಿ ಪ್ರಸ್ತುತ ಹುದ್ದೆಗಳನ್ನು ಉನ್ನತೀಕರಿಸುವ ವಿಷಯವು ಕಂದಾಯ ಇಲಾಖೆಯು ಪ್ರತ್ಯೇಕವಾಗಿ ಪರಿಶೀಲಿಸಬಹುದಾಗಿದೆಯೆಂದು ಅಭಿಪ್ರಾಯ ವ್ಯಕ್ತಪಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (3) ರಲ್ಲಿ ನಾಲ್ಕು ವಿಭಾಗದ ಪ್ರಾದೇಶಿಕ ಆಯುಕ್ತರುಗಳು ಕಂದಾಯ ಇಲಾಖೆಯ ತಾಲ್ಲೂಕು ಮಟ್ಟದ ಹಾಗೂ ಉಪ ವಿಭಾಗ ಮಟ್ಟದ ಕಾರ್ಯಾಲಯಗಳಲ್ಲಿ ತಹಶೀಲ್ದಾರ್ ಹಾಗೂ ಉಪ ವಿಭಾಗಾಧಿಕಾರಿಗಳು ಸರ್ಕಾರದ ಹೊಸ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಿರುವುದಲ್ಲದೆ, ಭೂಮಿ, ಚುನಾವಣೆ, ಕಾನೂನು ಸುವ್ಯವಸ್ಥೆ, ನೈಸರ್ಗಿಕ ವಿಕೋಪ, ಸಾಮಾಜಿಕ ಭದ್ರತಾ ಯೋಜನೆಗಳು, ಜನನ ದಾಖಲೆ, ಶಿಷ್ಟಾಚಾರ, ನ್ಯಾಯಾಲಯ ಪ್ರಕರಣಗಳು, ಭೂಸ್ವಾಧೀನ, ಆಹಾರ, ಮುಜರಾಯಿ, ರಾಷ್ಟ್ರೀಯ ಹಬ್ಬಗಳ ಆಚರಣೆ, ಸರ್ಕಾರಿ ಆಸ್ತಿ ಸಂರಕ್ಷಣೆ ಇತ್ಯಾದಿ ಕಾರ್ಯಚಟುವಟಿಕೆಗಳನ್ನು ಒಬ್ಬರೆ ಪತ್ರಾಂಕಿತ ಅಧಿಕಾರಿಯವರು ನಿರ್ವಹಿಸುವುದು ಅಧಿಕ ಹೊರೆಯಾದ ಕಾರ್ಯಗಾತ್ರವಾಗಿರುವುದರಿಂದ ಜನತೆಯ ಆಶೋತ್ತರಗಳಿಗೆ ಸ್ಪಂದಿಸುವಲ್ಲಿ ವಿಳಂಬ ಉಂಟಾಗುವುದೆಂದು ತಿಳಿಸಿರುತ್ತಾರೆ. ಅಲ್ಲದೆ, ತಹಶೀಲ್ದಾರ್ ಹಾಗೂ ಉಪ ವಿಭಾಗಾಧಿಕಾರಿಗಳ ಪ್ರವಾಸ ಮತ್ತು ಅನುಪಸ್ಥಿತಿಯಲ್ಲಿ ಈ ಎರಡೂ ಕಾರ್ಯಾಲಯಗಳಲ್ಲಿ ಕೆಲಸ ನಿರ್ವಹಿಸಲು ಪತ್ರಾಂಕಿತ

ಹುದ್ದೆ ಅವಶ್ಯಕತೆ ಇದೆ ಎಂದು ತಹಶೀಲ್ದಾರ್ ಕಾರ್ಯಾಲಯದ ಹಾಗೂ ಉಪ ವಿಭಾಗಾಧಿಕಾರಿಗಳ ಕಾರ್ಯಾಲಯದ ಒಂದು ಶಿರಸ್ತೇದಾರ್ ಹುದ್ದೆಯನ್ನು ಗ್ರೇಡ್ 'ಬಿ' ತಹಶೀಲ್ದಾರ್ ಹುದ್ದೆಗೆ ಉನ್ನತೀಕರಿಸುವುದು ಸೂಕ್ತವೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಕಂದಾಯ ಇಲಾಖೆಯ ತಾಲ್ಲೂಕು ಹಾಗೂ ಉಪ ವಿಭಾಗದ ಕಚೇರಿಗಳಲ್ಲಿನ ಮುಖ್ಯಸ್ಥರ ಕಾರ್ಯಭಾರ ಜವಾಬ್ದಾರಿಯನ್ನು ಕಡಿಮೆ ಮಾಡಿ ಅಧಿಕಾರ ವಿಕೇಂದ್ರೀಕರಣಗೊಳಿಸಿ 176 ತಾಲ್ಲೂಕುಗಳ ತಹಶೀಲ್ದಾರ ಕಾರ್ಯಾಲಯದಲ್ಲಿ ಒಂದು ಹುದ್ದೆಯನ್ನು ಹಾಗೂ 52 ಉಪ ವಿಭಾಗಾಧಿಕಾರಿಗಳ ಕಾರ್ಯಾಲಯದ ವ್ಯವಸ್ಥಾಪಕರ/ಶಿರಸ್ತೇದಾರರ ಒಂದು ಹುದ್ದೆಯನ್ನು ಒಳಗೊಂಡು ಒಟ್ಟು 228 ಶಿರಸ್ತೇದಾರರುಗಳ ಹುದ್ದೆಯನ್ನು ಗ್ರೇಡ್ 'ಬಿ' ತಹಶೀಲ್ದಾರರ ಹುದ್ದೆಗೆ ಉನ್ನತೀಕರಿಸುವುದು ಸಾರ್ವಜನಿಕ/ಸರ್ಕಾರದ ಹಿತದೃಷ್ಟಿಯಿಂದ ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 209 ಎಂವಿಎಸ್ 2002 (ಭಾ-1), ಬೆಂಗಳೂರು, ದಿನಾಂಕ 3ನೇ ಜೂನ್ 2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕಂದಾಯ ಇಲಾಖೆಯ ತಹಶೀಲ್ದಾರ್ ಕಾರ್ಯಾಲಯದ ಒಂದು ಶಿರಸ್ತೇದಾರ್ ಹುದ್ದೆ ಹಾಗೂ ಉಪ ವಿಭಾಗಾಧಿಕಾರಿಗಳ ಕಾರ್ಯಾಲಯದ ವ್ಯವಸ್ಥಾಪಕ (ಶಿರಸ್ತೇದಾರ್) ಹುದ್ದೆ ಒಳಗೊಂಡು ಒಟ್ಟು 228 ಹುದ್ದೆಗಳನ್ನು ರೂ. 11,400-21,600 ವೇತನ ಶ್ರೇಣಿಯ ಗ್ರೇಡ್ 'ಬಿ' ತಹಶೀಲ್ದಾರ್ ಹುದ್ದೆಗೆ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಿದೆ. ಈ ದಿಕ್ಕಿನಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿಯನ್ನು ಹೊರಡಿಸಲಾಗುವುದು.

ಸದರಿ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ) ಟಿಪ್ಪಣಿ ಸಂಖ್ಯೆ ಸಿಆಸುಇ 37 ಆಕಅ 2010 ದಿನಾಂಕ 18-12-2010 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 34 ವೆಚ್ಚ 7/2011, ದಿನಾಂಕ 16-5-2011ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-1).

ಪಿ.ಆರ್. 1442

## ಒಳಾಡಳಿತ ಸಚಿವಾಲಯ

**ವಿಷಯ :** ಕೇರಳ ರಾಜ್ಯದಲ್ಲಿ ನಡೆದ ವಿಧಾನಸಭಾ ಚುನಾವಣೆ ಬಂದೋಬಸ್ತ್ ಕರ್ತವ್ಯಕ್ಕೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ 10 ಕಂಪನಿಗಳನ್ನು ನಿಯೋಜಿಸಿರುವ ಬಗ್ಗೆ ಘಟನೋತ್ತರ ಮಂಜೂರಾತಿ ಕುರಿತು.

**ಓದಲಾಗಿದೆ :** ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರ ಪತ್ರ ಸಂಖ್ಯೆ : 24/ಡಿಪ್ಲಾಯ್/ವಿ.ಚು/2010-11, ದಿನಾಂಕ 17-05-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರು ತಮ್ಮ ಪ್ರಸ್ತಾವನೆಯಲ್ಲಿ ಕೇರಳ ರಾಜ್ಯದಲ್ಲಿ ನಡೆದ ವಿಧಾನಸಭಾ ಚುನಾವಣೆಯ ವಿಶೇಷ ಬಂದೋಬಸ್ತ್‌ಗಾಗಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ 10 ಕಂಪನಿಗಳನ್ನು ದಿನಾಂಕ 31-03-2011/01-04-2011 ರಿಂದ 14-04-2011 ರವರೆಗೆ ನಿಯೋಜಿಸಿದ್ದಕ್ಕೆ ಸಂಬಂಧಿಸಿದಂತೆ ಸರ್ಕಾರದಿಂದ ಘಟನೋತ್ತರ ಅನುಮೋದನೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 100 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ 31ನೇ ಮೇ 2011**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರು ಕೇರಳ ರಾಜ್ಯದಲ್ಲಿ ನಡೆದ ವಿಧಾನಸಭಾ ಚುನಾವಣೆಯ ವಿಶೇಷ ಬಂದೋಬಸ್ತ್‌ಗಾಗಿ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ ಹತ್ತು (10) ಕಂಪನಿಗಳನ್ನು ನಿಯೋಜಿಸಿ ಹೊರಡಿಸಿದ್ದ ಆದೇಶ ಸಂಖ್ಯೆ ಡಿಇಪಿ/24/ ಬಿಎಇ/2010-11, ದಿನಾಂಕ 25-03-2011 ಕ್ಕೆ ಸರ್ಕಾರವು ತನ್ನ ಘಟನೋತ್ತರ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಪಿ. ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು).

ಪಿ.ಆರ್. 1443

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ 2011-12ನೇ ಸಾಲಿನ ಹೊಸ ಯೋಜನೆಯಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ರೂ. 15.00 ಕೋಟಿಗಳ ಅನುದಾನ-ಆಡಳಿತಾತ್ಮಕ ಮಂಜೂರಾತಿ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ವಿಯಇ 189 ವಿತ್ರಮ 2010, ದಿನಾಂಕ 19-03-2011
2. ದಿನಾಂಕ 29-04-2011 ರಂದು ನಡೆದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 7ನೇ ಸಭೆಯಲ್ಲಿನ ತೀರ್ಮಾನ.
3. ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: ವಿ.ತಂ.ದಾ.ಸ/ಬಿಜಿಟಿ/2011-12/838, ದಿನಾಂಕ 11-05-2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದ 2011-12ನೇ ಸಾಲಿನ ಮುಂದುವರೆದ ಯೋಜನೆ/ಕಾರ್ಯಕ್ರಮಗಳಿಗೆ ಆಯವ್ಯಯ ಹಂಚಿಕೆ ಹಾಗೂ ಅನುಮೋದನೆ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ದಿನಾಂಕ 29-04-2011 ರಂದು ನಡೆದ 7ನೇ ಸಭೆಯಲ್ಲಿ ವಿಜ್ಞಾನ ಶಿಕ್ಷಣ ಕಾರ್ಯಕ್ರಮಗಳನ್ನು ಹಾಗೂ ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) ಕಾರ್ಯಕ್ರಮಗಳನ್ನು 2011-12ನೇ ಸಾಲಿನಲ್ಲಿ ನಡೆಸಲು ಆಯವ್ಯಯ ಅಂದಾಜು ವೆಚ್ಚದಲ್ಲಿ ನಿಗಧಿಪಡಿಸಿರುವ ರೂ. 15.00 ಕೋಟಿಗಳಿಗೆ ಕಾರ್ಯಕ್ರಮವನ್ನು ರೂಪಿಸಿರುತ್ತದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರದಲ್ಲಿ ದಿನಾಂಕ 29-04-2011 ರಂದು ನಡೆದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 7ನೇ ಸಭೆಯ ತೀರ್ಮಾನದಂತೆ ರೂ. 15.00 ಕೋಟಿಗಳ ವೆಚ್ಚದಲ್ಲಿ ವಿಜ್ಞಾನ ಶಿಕ್ಷಣ ಕಾರ್ಯಕ್ರಮಗಳನ್ನು ಹಾಗೂ ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) ಕಾರ್ಯಕ್ರಮಗಳನ್ನು ನಡೆಸಲು ಕ್ರಿಯಾ ಯೋಜನೆಯನ್ನು ಸಲ್ಲಿಸಿ ಆಡಳಿತಾತ್ಮಕ ಮಂಜೂರಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 90 ವಿತ್ರಮ 2011, ಬೆಂಗಳೂರು, ದಿನಾಂಕ : 25-05-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 2011-12ನೇ ಸಾಲಿನ ಕಾರ್ಯಕ್ರಮಗಳನ್ನು ಹಾಗೂ ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) ಕಾರ್ಯಕ್ರಮಗಳನ್ನು ರೂ. 15.00 ಕೋಟಿ (ರೂಪಾಯಿ ಹದಿನೈದು ಕೋಟಿಗಳು ಮಾತ್ರ) ವೆಚ್ಚದಲ್ಲಿ ಅನುಬಂಧ-1 ಮತ್ತು 2 ರಲ್ಲಿರುವಂತೆ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ವೆಚ್ಚವನ್ನು ಲೆಕ್ಕಶೀರ್ಷಿಕೆ 3425-60-600-0-02(059) (ಯೋಜನೆ) ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇದರಡಿ ಮತ್ತು ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಸುಧಾರಣೆಗೆ ಕರ್ನಾಟಕ ನಿಧಿ (K-FIST) ವೆಚ್ಚವನ್ನು ಲೆಕ್ಕಶೀರ್ಷಿಕೆ 3425-60-600-0-03(059) (ಯೋಜನೆ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಎಫ್‌ಡಿ 4 ಬಿಪಿಇ 2011, ದಿನಾಂಕ 31-03-2011ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಭಾನುಮತಿ**
ಪೀಠಾಧಿಕಾರಿಗಳು
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಅನುಬಂಧ-1

ಸರ್ಕಾರಿ ಆದೇಶ ಸಂಖ್ಯೆ: ವಿಯಇ 90 ವಿತ್ರಮ 2011, ದಿನಾಂಕ 25-05-2011,
ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 2011-12ನೇ ಸಾಲಿನ
ಮುಂದುವರೆದ ಯೋಜನಾ ಕಾರ್ಯಕ್ರಮಗಳು

| ಕ್ರ. ಸಂ. | ಕ್ರಿಯಾ ಯೋಜನೆಯ ಕಾರ್ಯಕ್ರಮಗಳು | ಕಾರ್ಯಕ್ರಮ ಅನುಷ್ಠಾನಗೊಳಿಸುವ ಇಲಾಖೆ/ಅಂಗ ಸಂಸ್ಥೆಗಳ ವಿವರ | ನಿಗದಿ ಪಡಿಸಿರುವ ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ |
|---|---|---|---|
| 1 | ಕರ್ನಾಟಕ ವಿಜ್ಞಾನ ವಿದ್ಯಾಜಾಗೃತಿ (ಜಿಲ್ಲಾ ಹಂತದ ವಿಜ್ಞಾನಿ-ವಿದ್ಯಾರ್ಥಿ ನೇರ ಸಂವಾದ ಕಾರ್ಯಕ್ರಮ (KVVJ) | ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | 68.00 |
| 2 | ಸೇವಾನಿರತ ಅಧ್ಯಾಪಕರಿಗೆ ವಿಜ್ಞಾನ ಮತ್ತು ತಂತ್ರಜ್ಞಾನದ ವೃತ್ತಿ ಉನ್ನತಿ ತರಬೇತಿ ಕಾರ್ಯಕ್ರಮಗಳು | ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ | 12.00 |
| 3 | ಪದವಿ ಪೂರ್ವ ಕಾಲೇಜುಗಳ ವಿಜ್ಞಾನ ಅಧ್ಯಾಪಕರಿಗೆ ಪುನಶ್ಚೇತನ ತರಬೇತಿ ಕಾರ್ಯಾಗಾರಗಳು (RC-PU) | ಪದವಿ ಪೂರ್ವ ಶಿಕ್ಷಣ ಇಲಾಖೆ | 18.00 |
| 4 | ಪದವಿ ಕಾಲೇಜುಗಳ ವಿಜ್ಞಾನ ಅಧ್ಯಾಪಕರಿಗೆ ತರಬೇತಿ ಕಾರ್ಯಾಗಾರಗಳು (FDP-UG) | State University PG Departments in collaboration with VGST. | 12.00 |
| 5 | ಇಂಜಿನಿಯರಿಂಗ್ ಕಾಲೇಜುಗಳ ಬೋಧಕರಿಗೆ ತರಬೇತಿ ಕಾರ್ಯಾಗಾರಗಳು (FDP-VTU) | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 50.00 |
| 6 | ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲಧನ (SMYSR) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 60.00 |
| 7 | ಪದವಿ ಕಾಲೇಜುಗಳಲ್ಲಿ ವಿಜ್ಞಾನದ ಸರಳ ಯೋಜನೆಗಳಿಗೆ ಸಹಾಯಾನುದಾನ (SPICE) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 20.00 |

| | | | |
|---|---|---|---|
| 8 | ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯದ ಶ್ರೇಷ್ಠ ಕೇಂದ್ರಗಳ ಸ್ಥಾಪನ (CESEM) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 300.00 |
| 9 | ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳ ಸ್ಥಾಪನೆ (CISE) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 240.00 |
| 10 | ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ ನೀಡಿದ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ ಪ್ರಶಸ್ತಿ (ASTSC) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 7.50 |
| 11 | ಶ್ರೇಷ್ಠ ಸಂಶೋಧನಾ ಪ್ರಬಂಧಗಳಿಗೆ ಪ್ರಶಸ್ತಿ (ARP) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 2.50 |
| 12 | ಕನ್ನಡದಲ್ಲಿ ವಿಜ್ಞಾನ ಕಾರ್ಯಕ್ರಮಗಳನ್ನು ನಿರ್ಮಿಸಿ ದೂರದರ್ಶನವಾಹಿನಿಯಲ್ಲಿ ಪ್ರಸಾರಗೊಳಿಸುವುದು. (K-SPTV) | ಮಾರ್ಕೆಟಿಂಗ್ ಕನ್ಸಲ್‌ಟೆನ್ಸಿ ಲಿಮಿಟೆಡ್ | 25.00 |
| 13 | ಅಂತಾರಾಷ್ಟ್ರೀಯ ರಸಾಯನಶಾಸ್ತ್ರ ವರ್ಷಾಚರಣೆ 2011ರ ಕುರಿತಾದ ಸಾಫ್ಟ್‌ವೇರ್‌ಗಳ ಅಭಿವೃದ್ಧಿ (SSP) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 20.00 |
| 14 | ದಾರ್ಶನಿಕ ಸಮೂಹದ ವೆಬ್‌ತಾಣದ ಅಭಿವೃದ್ಧಿ ಮತ್ತು ನಿರ್ವಹಣೆ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ತ್ರೈಮಾಸಿಕ ವಾರ್ತಾಪತ್ರದ ಪ್ರಕಟಣೆ (Web Portal) | ಕಿಯೋನಿಕ್ಸ್ | 3.00 |
| 15 | ಪ್ರೌಢಶಾಲೆಗಳಲ್ಲಿ 'ವಿಜ್ಞಾನ ಸಂಘಗಳ ಸ್ಥಾಪನೆ (SC) | ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ | 39.00 |
| 16 | ವಿಜ್ಞಾನ ಮೇಳಗಳ ಆಯೋಜನೆ (SM) | ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ | 20.00 |
| 17 | ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಮ್ಮೇಳನ–2011 (STC) | ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ | 10.00 |
| 18 | ಇಂಜಿನಿಯರಿಂಗ್ ವಿಷಯಗಳಲ್ಲಿ ಪಾಲಿಟೆಕ್ನಿಕ್ ವಿದ್ಯಾರ್ಥಿಗಳು ಕಾರ್ಯ ಮಾದರಿಗಳ ನಿರ್ಮಾಣಕ್ಕೆ ಅನುದಾನ ನೀಡುವುದು. | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ | 10.00 |
| 19 | ರಾಜ್ಯದ ಆಯ್ದ ಪ್ರೌಢಶಾಲೆಗಳ ಪ್ರಯೋಗಾಲಯಗಳನ್ನು ವಿನೂತನ ವಿಜ್ಞಾನ ಮಾದರಿಗಳಿಂದ ಉನ್ನತೀಕರಣ | ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ) | 39.00 |
| 20 | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಚೇರಿಯ ನಿರ್ವಹಣೆ ಮತ್ತು ಆಡಳಿತಾತ್ಮಕ ವೆಚ್ಚಗಳು | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 44.00 |
| | | ಒಟ್ಟು | 1000.00 |

**ಅನುಬಂಧ–2**

| ಕ್ರ. ಸಂ. | ಕ್ರಿಯಾ ಯೋಜನೆಯ ಕಾರ್ಯಕ್ರಮಗಳು | ಕಾರ್ಯಕ್ರಮ ಅನುಷ್ಠಾನಗೊಳಿಸುವ ಇಲಾಖೆ/ಅಂಗ ಸಂಸ್ಥೆಗಳ ವಿವರ | ನಿಗದಿ ಪಡಿಸಿರುವ ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ |
|---|---|---|---|
| 1 | ಕರ್ನಾಟಕ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | 500.00 |
| | | ಒಟ್ಟು | 500.00 |

**ಕೆ. ಭಾನುಮತಿ**
ಪೀಠಾಧಿಕಾರಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1445

## EDUCATION SECRETARIAT

**Sub :** Constitution of Karnataka State Innovation Council

**Read :** Letter No. KJA/Innovation/6,8/2011/555, dated 28-3-2011

**Preamble :**

The Karnataka Jnana Aayoga has recommended the constitution of the Karnataka State Innovation Council in the State. A National level innovation council (NInC) has been constituted. The core focus of the National level innovation council is to drive the Indian Model of Innovation to provide solutions related to basic common needs for the people. The Chairman of National level innovation council has requested the Hon'ble Chief Minister of Karnataka to also have such an Innovative council in the State. This matter has been deliberated in detail and it has been decided to constitute the State Innovation Council in the State. Hence the following Order.

**Government Order No. : ED 255 URC 2010, Bangalore, dated 1-6-2011**

In the above circumstances, the Government are pleased to constitute Karnataka State Innovation Council in the State with the following Chairman & Members of the Council and terms of reference.

| | | | |
|---|---|---|---|
| 1. | Prof. H. P. Khincha,<br>Chairman, Dept. of Electrical Engineering,<br>Indian Institute of Science | … | Chairman |
| 2. | Dr. Deviprasad Shetty<br>Chairman, Narayana Hrudayalaya | … | Member |
| 3. | Dr. Kiran Mazumdar Shaw<br>Chairman, Managing Director, Biocon Ltd., | … | Member |
| 4. | Shri Janardhana Swamy<br>Member of Parliament, Chitradurga | … | Member |
| 5. | Prof. M. S. Valiathan<br>National Research Professor, Manipal University | … | Member |
| 6. | Prof. V. S. Ramamurthy<br>Director, National Institute of Advanced Studies | … | Member |
| 7. | Dr. Pankaj Chandra<br>Director, Indian Institute of Management, Bangalore | … | Member |
| 8. | Sri Dileep K. Ranjekar<br>CEO, Azim Premji Foundation | … | Member |
| 9. | Prof. R. S. Deshpande<br>Director, Institute for Social and Economic Change | … | Member |
| 10. | Prof. S. Sadagopan<br>Director, IIIT, Bangalore | … | Member |
| 11. | Dr. V. S. Hegde<br>Scientific Secretary, ISRO, Bangalore | … | Member |
| 12. | Sri M. P. Kumar<br>Chairman, & CEO, Global Edge Software Ltd., Bangalore | … | Member |
| 13. | Sri Ramji Raghavan<br>Chairman, Agastya Foundation, Bangalore | … | Member |
| 14. | Sri K. R. Sridhara Murthi<br>Senior Expert, Office of Adviser to Prime Minister<br>Public Information Infrastructure & Innovation, Govt. of India. | … | Member |
| 15. | Vice-Chancellor<br>Visvesvaraya Technological University, Belgaum | … | Member |
| 16. | Sri Venkatesh Murthy<br>Founder, Co-ordinator, Youth for Seva | … | Member |
| 17. | Principal Secretary to Government<br>Dept. of Higher Education, Govt. of Karnataka, Bangalore | … | Member |
| 18. | Principal Secretary to Government<br>Dept. of E-Governance, Govt. of Karnataka, Bangalore | … | Member |
| 19. | Principal Secretary to Government<br>Dept. of IT, BT & Science & Technology,<br>Govt. of Karnataka, Bangalore | … | Member |
| 20. | Prof. M. K. Sridhar<br>Member-Secretary & Executive Director,<br>Karnataka Knowledge Commission, Bangalore | … | Member Secretary |

Terms of Reference:-

1. Support Government to Promote innovation in the State
2. Map opportunities for innovation in the State
3. Identify and reward talent in innovation and disseminate success stories
4. Organise seminars, lectures, workshops on innovation and create State innovation portal to educate.
5. Help to create innovation eco-systems
6. Evolving a State model of innovation with focus on inclusive growth
7. Facilitating linkages/networks among all the educational and knowledge institutions at all levels for promotion of innovation in the State.
8. Creating special research fund to encourage innovation outside the formal structure.
9. Formulating special schemes/steps/measures to drive innovation in rural areas
10. Initiating policy measures to encourage innovation in social sectors like agriculture, education, health, ecology, rural and urban development, water resources, renewable energy.
11. Encouraging innovation in governance; public service delivery and SMEs.
12. Undertaking any other measure which the Council feels appropriate
13. Office of the Karnataka Jnana Aayoga shall be the Administrative Office and Secretariat of the Karnataka Innovation Council.
14. The expenditure on account of Karnataka Innovation Council shall met be out of the budget of the Karnataka Jnana Aayoga.

By Order and in the name of the Governor of Karnataka

**U. B. Ulavi**

Under Secretary to Government

P.R. 1446 Education Department (Universities)

**ಶಿಕ್ಷಣ ಸಚಿವಾಲಯ**

**ವಿಷಯ :** 2011–12ನೇ ಸಾಲಿನ ಆರ್ಥಿಕ ವರ್ಷಕ್ಕೆ ಕರ್ನಾಟಕ ಪಠ್ಯ ಪುಸ್ತಕ ಸಂಘದ ಸಿಬ್ಬಂದಿ ವೇತನ ಭತ್ಯೆ, ಇತರೇ ವೆಚ್ಚ ಹಾಗೂ ಪಠ್ಯ ಪುಸ್ತಕಗಳ ಮುದ್ರಣಾ ವೆಚ್ಚಗಳನ್ನು ಭರಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 85 ಯೋಯೋಕ 2011, ದಿನಾಂಕ 08–04–2011
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 88 ಯೋಯೋಕ 2011, ದಿನಾಂಕ 18–04–2011
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರುರವರ ಪತ್ರಸಂಖ್ಯೆ ಕಪಪುಸಂ/ಲೆಶಾ1/ಆಯವ್ಯಯ 6/2010–11/ದಿನಾಂಕ 25–04–2011.

**ಪ್ರಸ್ತಾವನೆ :**

4. ಮೇಲೆ 1 ರಲ್ಲಿ ಓದಲಾದ ದಿನಾಂಕ 08–04–2011ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಪಠ್ಯ ಪುಸ್ತಕ ಸಂಘಕ್ಕೆ 2011–12ನೇ ಸಾಲಿಗೆ ಯೋಜನೆಯಡಿ ನಿಗದಿಯಾಗಿರುವ ರೂ. 1000.00 ಲಕ್ಷಗಳಲ್ಲಿ ಮೊದಲನೆಯ ತ್ರೈಮಾಸಿಕ ಕಂತಾಗಿ ರೂ. 250.00 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ದಿನಾಂಕ 18–04–2011ರ ಸರ್ಕಾರಿ ಆದೇಶದಲ್ಲಿ 2011–12ನೇ ಸಾರಿಗೆ ಯೋಜನೇತರದಡಿ ಕರ್ನಾಟಕ ಪಠ್ಯ ಪುಸ್ತಕ ಸಂಘಕ್ಕೆ ಒದಗಿಸಿರುವ ರೂ. 4000.00 ಲಕ್ಷಗಳಲ್ಲಿ ಮೊದಲನೆಯ ಕಂತಾಗಿ 1000.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ. ಮೇಲೆ (3) ರಲ್ಲಿ ಓದಲಾದ ತಮ್ಮ ದಿನಾಂಕ 25–04–2011ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯಪುಸ್ತಕ ಸಂಘ ರವರು 2011–12ನೇ ಸಾಲಿನ ಪಠ್ಯಪುಸ್ತಕ ಮುದ್ರಣಕ್ಕೆ ಸಂಬಂಧಿಸಿದಂತೆ ಮುದ್ರಕರುಗಳಿಂದ ಪಠ್ಯ ಪುಸ್ತಕಗಳ ಮುದ್ರಣ ಬಾಬ್ತು ಬಿಲ್ಲುಗಳು ಬರಲಾರಂಭಿಸಿದ್ದು ಅವುಗಳನ್ನು ತ್ವರಿತವಾಗಿ ಪಾವತಿಸಬೇಕಾಗಿರುವುದರಿಂದ 2011–12ನೇ ಸಾಲಿಗೆ ಯೋಜನೆ ಮತ್ತು ಯೋಜನೇತರದಡಿ ನಿಗದಿಯಾಗಿರುವ ಪೂರ್ಣ ಮೊತ್ತವನ್ನು ಒಂದೇ ಕಂತಿನಲ್ಲಿ ಕೂಡಲೇ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 88 ಯೋಯೊಕ 2011, ಬೆಂಗಳೂರು, ದಿನಾಂಕ : 19–05–2011**

**[ಇಡಿ 35 ಸ್ಕೀಮರ (ಯುನಿಕ್) 2011, ದಿನಾಂಕ 19–05–2011]**

5. 2011–12ನೇ ಸಾಲಿನಲ್ಲಿ ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು ಇದರ ಸಿಬ್ಬಂದಿ ವೇತನ ಇತರೇ ಭತ್ಯೆ ಹಾಗೂ ಪಠ್ಯ ಪುಸ್ತಕಗಳ ಮುದ್ರಣ ವೆಚ್ಚವಾಗಿ ಎರಡನೇ ಕಂತಾಗಿ ಆಯವ್ಯಯ ಲೆಕ್ಕಶೀರ್ಷಿಕೆ 2058–00–103–0–09–101[ಯೋಜನೆ] ಅಡಿ 750.00 ಲಕ್ಷ ರೂ.ಗಳು [ಏಳು ನೂರಾ ಐವತ್ತು ಲಕ್ಷ ರೂಪಾಯಿಗಳು] ಮತ್ತು 2058–00–103–0–09–101[ಯೋಜನೇತರ] ಅಡಿ 3000.00 ಲಕ್ಷ ರೂ.ಗಳು [ಮೂರು ಸಾವಿರ ಲಕ್ಷ ರೂಪಾಯಿಗಳು ಮಾತ್ರ] ಹೀಗೆ ಒಟ್ಟು 3750.00 ಲಕ್ಷ ರೂ.ಗಳು[ಮೂರು ಸಾವಿರದ ಏಳು ನೂರಾ ಐವತ್ತು ಲಕ್ಷ ರೂಪಾಯಿಗಳು ಮಾತ್ರ] ಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿದೆ.

6. ಸದರಿ ಮೊತ್ತವನ್ನು ಪಾವತಿಸುವ ಸಲುವಾಗಿ ಖಜಾನೆಯಲ್ಲಿ ಅಪ್ ಲೋಡ್ ಮಾಡಲು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ ಮತ್ತು ಸದರಿ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು ಇವರು ಸೆಳೆಯಲು ಅನುಕೂಲವಾಗುವಂತೆ ಅವರು ಸಲ್ಲಿಸುವ ಬಿಲ್ಲುಗಳಿಗೆ ಮೇಲು ಸಹಿ ಮಾಡುವ ಅಧಿಕಾರವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಇವರ ಮೇಲು ಸಹಿಯಾದ

ನಂತರ ಈ ಮೊತ್ತವನ್ನು ರಾಜ್ಯ ಹುಜೂರು ಖಜಾನೆಯಿಂದ ಸೆಳೆಯಬಹುದು. ಸರ್ಕಾರದಿಂದ ಬಿಡುಗಡೆಯಾದ ಅನುದಾನಕ್ಕೆ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯ ಪುಸ್ತಕ ಸಂಘ [ರಿ] ಬೆಂಗಳೂರು, ಇವರು ಸೂಕ್ತ ಲೆಕ್ಕಪತ್ರಗಳನ್ನು ಇಡತಕ್ಕದ್ದು.

7. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಕ್ಕೆ 2011-12ನೇ ಸಾಲಿಗೆ ನಿಗದಿ ಪಡಿಸಿರುವ ಒಟ್ಟಾರೆ ಆಯವ್ಯಯದಲ್ಲಿ ಲೇಖಾನುದಾನವಾಗಿ ಬಿಡುಗಡೆಯಾಗಿರುವ ಮೊತ್ತದ ಮಿತಿಯನ್ನು ಕಾಯ್ದುಕೊಳ್ಳತಕ್ಕದ್ದು.

8. ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ 421 ವೆಚ್ಚ 8/2011, ದಿನಾಂಕ 18-05-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1447 ಶಿಕ್ಷಣ ಇಲಾಖೆ (ಯೋಜನೆ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯನ್ನು ಪುನರ್ ರಚನೆ ಮಾಡಲು ಸಂಬಂಧ ಉನ್ನತಾಧಿಕಾರ ಸಮಿತಿಯ ರಚನೆ.

**ಓದಲಾಗಿದೆ :** ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-1(ಅ)/ವಿವ/ಪಇಪು/10-11 (ಭಾಗ-2), ದಿನಾಂಕ 17-03-2011.

**ಪ್ರಸ್ತಾವನೆ :**

2011-12ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಯವರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪುನರ್‌ರಚನೆ ಮಾಡುವ ವ್ಯವಸ್ಥೆ ಸಂಬಂಧ ಸಿದ್ಧವಾಗಿರುವ ವರದಿಯನ್ನು ಅನುಷ್ಠಾನಗೊಳಿಸಲು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರ ಸಮಿತಿಯನ್ನು ರಚಿಸಿ, ಸದರಿ ಸಮಿತಿಯ ಸಲಹೆಗಳನ್ನು ಅನುಷ್ಠಾನಕ್ಕೆ ತರಲು ಸೂಕ್ತ ಕ್ರಮ ತೆಗೆದುಕೊಳ್ಳುವುದಾಗಿ ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯನ್ನು ಪುನರ್ ರಚನೆ ಮಾಡುವ ಸಂಬಂಧ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರ ಸಮಿತಿ ರಚಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪುನರ್ ರಚನೆ ಮಾಡುವ ಸಂಬಂಧ ಸಿದ್ಧವಾಗಿರುವ ವರದಿಯನ್ನು ಪರಿಶೀಲಿಸಿ ಸಲಹೆ-ಸೂಚನೆಗಳನ್ನು ನೀಡಲು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರ ಸಮಿತಿ ಒಂದನ್ನು ರಚಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 56 ಪಸಸೇ 2011, ಬೆಂಗಳೂರು, ದಿನಾಂಕ : 28-05-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯನ್ನು ಪುನರ್ ರಚನೆ ಮಾಡುವ ಸಂಬಂಧ ಸಿದ್ಧವಾಗಿರುವ ವರದಿಯನ್ನು ಪರಿಶೀಲಿಸಿ ಸಲಹೆ-ಸೂಚನೆಗಳನ್ನು ನೀಡಲು ಅನುವಾಗುವಂತೆ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಉನ್ನತಾಧಿಕಾರ ಸಮಿತಿ ಒಂದನ್ನು ರಚಿಸಲಾಗಿದೆ.

| | | |
|---|---|---|
| 1 | ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ, ಬೆಂಗಳೂರು. | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ಬೆಂಗಳೂರು | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಬೆಂಗಳೂರು | ಸದಸ್ಯರು |
| 5 | ಸರ್ಕಾರದ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ, ಬೆಂಗಳೂರು | ಸದಸ್ಯರು |
| 6 | ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ಬೆಂಗಳೂರು | ಸದಸ್ಯರು |
| 7 | ಸರ್ಕಾರದ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಬೆಂಗಳೂರು | ಸದಸ್ಯರು |
| 8 | ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು | ಸದಸ್ಯರು |
| 9 | ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು | ಸದಸ್ಯರು |
| 10 | ಸರ್ಕಾರದ ಜಂಟಿ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ/ ಸಂಚಾಲಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕೆ. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1448 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

ವಿಷಯ: ಶ್ರೀ ಕೆ.ಆರ್. ಚಾಮಯ್ಯ, ಏಕಸದಸ್ಯ ಸಮಿತಿಯನ್ನು ದಿನಾಂಕ: 01–04–2011 ರಿಂದ 31–07–2011ರವರೆಗೆ ಮುಂದುವರೆಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 38 ಆಡಳಿತ 2004, ದಿನಾಂಕ: 21–07–2005.
2) ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 65 ಆಡಳಿತ 2011, ದಿನಾಂಕ: 19–03–2011.
3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 150 ವೆಚ್ಚ–10/2011, ದಿನಾಂಕ: 26–04–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರದ ನಿವೃತ್ತ ಕಾನೂನು ಕಾರ್ಯದರ್ಶಿಗಳು ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ನಿವೃತ್ತಿ ಉಪಾಧ್ಯಕ್ಷರು ಆದ ಶ್ರೀ ಕೆ.ಆರ್. ಚಾಮಯ್ಯರವರ ನೇತೃತ್ವದಲ್ಲಿ ಸಿಬ್ಬಂದಿ ಸಮೇತ ಏಕಸದಸ್ಯ ಸಮಿತಿಯನ್ನು ರಚಿಸಲಾಯಿತು. ಏಕಸದಸ್ಯ ಸಮಿತಿಯ ಅಧ್ಯಕ್ಷರು ಕಾರ್ಯವರದಿ ಮಾಡಿಕೊಂಡ ನಂತರದಿಂದ ಒಂದು ವರ್ಷದ ಮಟ್ಟಿಗೆ ಕಾಲಾವಧಿಯನ್ನು ನಿಗದಿಪಡಿಸಲಾಗಿತ್ತು. ಬೆಂಗಳೂರಿನ ವಿಶ್ವೇಶ್ವರಯ್ಯ ಮುಖ್ಯ ಗೋಪುರದ 11ನೇ ಮಹಡಿಯಲ್ಲಿ ಸದರಿ ಏಕಸದಸ್ಯ ಸಮಿತಿಗೆ ಸ್ಥಳಾವಕಾಶ ಕಲ್ಪಿಸಿದ ನಂತರ ಶ್ರೀ ಕೆ.ಆರ್. ಚಾಮಯ್ಯರವರು ದಿನಾಂಕ: 07–12–2005ರಂದು ಈ ಸಮಿತಿಯ ಕೆಲಸಕಾರ್ಯಗಳ ನಿರ್ವಹಣೆಗೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಏಕಸದಸ್ಯ ಸಮಿತಿಯ ಅವಧಿಯನ್ನು ದಿನಾಂಕ: 01–04–2011 ರಿಂದ ದಿನಾಂಕ: 31–04–2011ರವರೆಗೆ ಮುಂದುವರೆಸಲು ಆರ್ಥಿಕ ಇಲಾಖೆಯ ಘಟನೋತ್ತರ ಸಹಮತಿಯನ್ನು ಕಾಯ್ದಿರಿಸಿ, ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಏಕಸದಸ್ಯ ಸಮಿತಿಯ ಕಾರ್ಯಾವಧಿಯನ್ನು ದಿನಾಂಕ: 01–04–2011 ರಿಂದ 31–07–2011ರವರೆಗೆ ಮುಂದುವರೆಸುವ ಆಡಳಿತ ಇಲಾಖೆಯ ಕ್ರಮಕ್ಕೆ ಆರ್ಥಿಕ ಇಲಾಖೆಯ ಘಟನೋತ್ತರ ಸಹಮತಿ ನೀಡಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 65 ಆಡಳಿತ 2011 ಬೆಂಗಳೂರು ದಿನಾಂಕ: 26–05–2011**

ಶ್ರೀ ಕೆ.ಆರ್. ಚಾಮಯ್ಯ ಏಕಸದಸ್ಯ ಸಮಿತಿಯ ಕಾರ್ಯಾವಧಿಯನ್ನು ದಿನಾಂಕ: 01–04–2011 ರಿಂದ 31–07–2011ರವರೆಗೆ ಮುಂದುವರೆಕೆಗೆ ಆರ್ಥಿಕ ಇಲಾಖೆಯ ಘಟನೋತ್ತರ ಸಹಮತಿ ದೊರೆತಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. ನಂ. 1449

## ಇಂಧನ ಸಚಿವಾಲಯ

ವಿಷಯ: ಮೆ: ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರ 925 ಕಿಲೋ ವ್ಯಾಟ್ ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆ – 1ನ್ನು 708 ಕಿಲೋ ವ್ಯಾಟ್ ಸಾಮರ್ಥ್ಯಕ್ಕೆ ಕಡಿಮೆಗೊಳಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 378 ಎನ್‌ಸಿಇ 2004 ದಿನಾಂಕ: 21–12–2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 220 ಎನ್‌ಸಿಇ 2006 ದಿನಾಂಕ: 23–06–2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 181 ಎನ್‌ಸಿಇ 2007 ದಿನಾಂಕ: 16–05–2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ ಎಸ್‌ಹೆಚ್/187/2011/1428 ದಿನಾಂಕ: 18/20–05–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಆದೇಶದಲ್ಲಿ ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ: 18ಕ್ಕೆ ಅಡ್ಡಲಾಗಿ 1.3 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಆದೇಶದಲ್ಲಿ ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ: 18ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.3 ಸಾಮರ್ಥ್ಯವನ್ನು 1.475 ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ಆದೇಶದಲ್ಲಿ ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಹೆಸರನ್ನು ಮೆ: ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾವಣೆ ಮಾಡಿ 1.475 ಮೆಗಾ ವ್ಯಾಟ್ ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆಯನ್ನು Chainage 4.5 KM to 6.5 KM (925 KW) ಮತ್ತು Chainage 11.5 KM to 13.5 Km (550 KW) ಎಂದು ಎರಡು ಹಂತದಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಯೋಜನೆಯ ಸ್ಥಳದಲ್ಲಿ 925 ಕಿಲೋ ವ್ಯಾಟ್ ಸಾಮರ್ಥ್ಯವನ್ನು ಉತ್ಪಾದಿಸಲು ಬೇಕಾಗುವ ನೀರಿನ ಎತ್ತರವು ಲಭ್ಯವಿಲ್ಲದಿರುವುದರಿಂದ ಸಾಮರ್ಥ್ಯವನ್ನು 708 ಕಿಲೋ ವ್ಯಾಟ್‌ಗೆ ಸೀಮಿತಗೊಳಿಸಿ ಆದೇಶ ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 235 ಎನ್‌ಸಿಇ 2011 ಬೆಂಗಳೂರು ದಿನಾಂಕ: 31–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 137 ಎನ್‌ಸಿಇ 2002 ದಿನಾಂಕ: 22–06–2002 ರಲ್ಲಿ ಮೆ: ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ: 18ಕ್ಕೆ Chainage 4.5 KM to 6.5 KMನಲ್ಲಿ ಅನುಮತಿಸಲಾದ 925 KW ಸಾಮರ್ಥ್ಯವನ್ನು 708 ಕಿಲೋವ್ಯಾಟ್ ಸಾಮರ್ಥ್ಯ ಕಡಿಮೆಗೊಳಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. ನಂ. 1450

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

ಸಂಖ್ಯೆ: ಸಿಆಸುಇ 21 ಸೇಸವಿ 2011 ಬೆಂಗಳೂರು, ದಿನಾಂಕ: 31–05–2011.

ವಿಷಯ: ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿ/ನೌಕರರ ವೇತನದಿಂದ ಸಂಘದ 2011ನೇ ವರ್ಷದ ಸದಸ್ಯತ್ವ ಶುಲ್ಕವನ್ನು ಕಟಾವುಗೊಳಿಸಿ ಸಂಘಕ್ಕೆ ಸಂದಾಯ ಮಾಡುವ ಬಗ್ಗೆ.

ಓದಲಾಗಿದೆ:
1) ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇಸವಿ 1993 ದಿನಾಂಕ: 24–12–1993
2) ಸುತ್ತೋಲೆ ಸಂಖ್ಯೆ: ಸಿಆಸುಇ 19 ಸೇಸವಿ 2005 ದಿನಾಂಕ: 16–11–2005.
3) ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಪತ್ರ ಸಂಖ್ಯೆ: ಜಿಇಎ 241/10–11 ದಿನಾಂಕ: 07–04–2011.

ದಿನಾಂಕ: 24–12–93ರ ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ವಾರ್ಷಿಕ ಸದಸ್ಯತ್ವ ಶುಲ್ಕವಾದ ರೂ. 6–00 (ಆರು ರೂಪಾಯಿಗಳು ಮಾತ್ರ)ಗಳನ್ನು ನೀಡಬಯಸುವ ರಾಜ್ಯ ಸರ್ಕಾರಿ ನೌಕರರಿಂದ ಪ್ರತಿ ವರ್ಷ ಅಕ್ಟೋಬರ್ ಅಥವಾ ನವೆಂಬರ್ ತಿಂಗಳುಗಳ ಸಂಬಳದಿಂದ, ಸದರಿ ಆದೇಶದಲ್ಲಿರುವ ಷರತ್ತುಗಳಿಗನುಸಾರವಾಗಿ ಕಡಿತಗೊಳಿಸಿ ಚೆಕ್ ಅಥವಾ ಡಿ.ಡಿ. ಮೂಲಕ ಸಂಘಕ್ಕೆ ಸಂದಾಯಗೊಳಿಸಲು ಸೂಚನೆ ನೀಡಲಾಗಿತ್ತು.

ದಿನಾಂಕ: 16–11–2005ರ ಉಲ್ಲೇಖಿತ ಸುತ್ತೋಲೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ವಾರ್ಷಿಕ ಸದಸ್ಯತ್ವ ಶುಲ್ಕವಾದ ರೂ. 20–00 (ಇಪ್ಪತ್ತು ರೂಪಾಯಿಗಳು ಮಾತ್ರ)ಗಳನ್ನು ನೀಡಬಯಸುವ ರಾಜ್ಯ ಸರ್ಕಾರಿ ನೌಕರರಿಂದ 2005–06ನೇ ಸಾಲಿಗೆ ಫೆಬ್ರವರಿ/ಮಾರ್ಚ್ ತಿಂಗಳ ಸಂಬಳದಿಂದಲೂ ಮತ್ತು ಮುಂಬರುವ ವರ್ಷಗಳಲ್ಲಿ ಪ್ರತಿ ವರ್ಷ ಜನವರಿ ಅಥವಾ ಫೆಬ್ರವರಿ ತಿಂಗಳ ಸಂಬಳದಿಂದ ಕಡಿತ ಮಾಡಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಸಂದಾಯ ಮಾಡಬಹುದೆಂದು ರಾಜ್ಯದ ಎಲ್ಲಾ ಖಜಾನೆ ಅಧಿಕಾರಿಗಳು ಮತ್ತು ವೇತನ ಬಟವಾಡೆ ಅಧಿಕಾರಿಗಳಿಗೆ ಸೂಚನೆಗಳನ್ನು ನೀಡಲಾಗಿತ್ತು.

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ 2011ನೇ ಸಾಲಿನ ವಾರ್ಷಿಕ ಸದಸ್ಯತ್ವ ಶುಲ್ಕವಾದ ರೂ. 20–00 (ಇಪ್ಪತ್ತು ರೂಪಾಯಿಗಳು ಮಾತ್ರ)ಗಳನ್ನು ನೀಡಬಯಸುವ ಸಚಿವಾಲಯ ನೌಕರರಿಂದ ಜೂನ್ ತಿಂಗಳ ವೇತನದಲ್ಲಿ ಕಡಿತಗೊಳಿಸಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಖಾತೆಗೆ ಜಮಾ ಮಾಡತಕ್ಕದ್ದು. ಈ ಸದಸ್ಯತ್ವ ಶುಲ್ಕವನ್ನು ನೀಡಲು ಯಾವುದೇ ಸದಸ್ಯರು ಒಪ್ಪದಿದ್ದಲ್ಲಿ ಅವರು ತಮ್ಮ ವೇತನದಿಂದ ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಲು ತಮ್ಮ ಅಸಮ್ಮತಿಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ–1) ಅವರಿಗೆ ದಿನಾಂಕ: 15–06–2011ರೊಳಗೆ ಲಿಖಿತದಲ್ಲಿ ತಿಳಿಸಬಹುದಾಗಿದೆ.

ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಿ ಸಂಘಕ್ಕೆ ಪಾವತಿ ಮಾಡಲು ದಿನಾಂಕ: 24–12–1993ರ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಿದ ವಿಧಾನವನ್ನು ಅನುಸರಿಸುವಂತೆ ಸೂಚಿಸಲಾಗಿದೆ.

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1451

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾನಿಯಮಗಳು–1)

## HEALTH AND FAMILY WELFARE SECRETARIAT

**Sub:** Awarding Contract for conduct of Baseline Survey of Thayi Bhagya Yojane in Karnataka-reg.

***Read:***
1. E-mail of the World Bank dated: 23-02-2011.
2. Proceedings of the 7th Meeting of the Project Governing Board held on 26-03-2011.

**PREAMBLE:**

Karnataka is experiencing shortage of specialists particularly in the field of Obstetrics, Anaesthesia and Paediatrics. At the same time the private medical sector has a strong presence in Karnataka offering the above services. To tap this resource, as a Public Private Partnership, it is proposed to recognize some of the private hospitals in 6 ‘C’ category (Bidar, Gulbarga, Raichur, Koppal, Bijapur, Bagalkote) and Chamarajanagar Districts, which has poor MMR and IMR parameters.

Main objectives:-

- To increase the skilled birth attendance.
- To increase the institutional delivery rate
- To buffer against the high cost of emergency obstetric care.

An Expression of Interest (EoI) was invited for conducting the Baseline Survey of Thayi Bhagya Yojane. The same was published in Kannada Prabha and Deccan Herald newspapers on 19-07-2010. In response to this, 25 applications were received from various firms. A Committee evaluated the EoIs received. The method of selection followed is QCBS method as per World Bank Procedure. The Request for Proposals (RFPs) was issued to 6 shortlisted firms. 5 RFPs were received and these RFPs were evaluated. The Technical and Financial scorings were evaluated. M/s AC Nielsen ORG MARG Pvt. Ltd (The Nielsen Company), Bangalore, has quoted Rs. 1,16,76,130+applicable service tax. The World Bank has also conveyed its 'no objection' vide e-mail read at (1) above.

The Project Governing Board approved to award the contract to M/s AC Nielsen ORG MARG Pvt. Ltd (The Nielsen Company), Bangalore to carry out for Baseline Survey of Thayi Bhagya Yojane in its proceedings read at (2) above.

Hence, the following order.

**Govt. Order No.: HFW/KHSDRP/PPP/Thayi Bhagya/03/2009-10, Bangalore, Dated: 20-05-2011**

Under the circumstances mentioned in the preamble, Government are pleased to accord approval to award the contract to M/s AC Nielsen ORG MARG Pvt. Ltd (The Nielsen Company), Bangalore to carry out Baseline Survey of Thayi Bhagya Yojane for a total negotiated cost of Rs. 1,16,76,130 (Rupees one crore sixteen lakhs seventy six thousand one hundred thirty only)+service tax as applicable.

The consultancy firm shall enter into an Agreement with the Project accordingly. The ToRs shall form part of the Agreement.

By Order and in the name of the Governor of Karnataka
**M. SHASHIDHAR**
Deputy Secretary to Government
KHSDRP, Health and Family Welfare Department.

PR No. 1452

## ಯುವಜನ ಸೇವಾ ಸಚಿವಾಲಯ

ವಿಷಯ: ಆಟದ ಮೈದಾನಗಳ ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ Karnataka State Playing Fields Association ನಿಯಮಗಳನ್ನು ರಚಿಸುವ ಬಗ್ಗೆ.

ಓದಲಾಗಿದೆ: 1) ದಿನಾಂಕ: 27–01–2011ರ ಯುಸೇಇ 109 ಯುಸೇಕ್ರೀ 2010ನೇ ಸಂಖ್ಯೆಯ ಸರ್ಕಾರದ ಆದೇಶ.
2) ದಿನಾಂಕ: 26–02–2011ರ ಯುಸೇಇ 109 ಯುಸೇಕ್ರೀ 2010ನೇ ಸಂಖ್ಯೆಯ ತಿದ್ದುಪಡಿ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಆಟದ ಮೈದಾನಗಳನ್ನು ಸಂರಕ್ಷಿಸಿ ಅಭಿವೃದ್ಧಿ ಪಡಿಸುವ ಮೂಲಕ ಸಾರ್ವಜನಿಕರ ಸಕ್ರಿಯ ಪಾಲ್ಗೊಳ್ಳುವಿಕೆಯೊಡನೆ ಕ್ರೀಡಾ ಚಟುವಟಿಕೆಗಳನ್ನು ಉತ್ತೇಜಿಸುವ ದೃಷ್ಟಿಯಿಂದ ಮೇಲೆ ಓದಲಾದ ದಿನಾಂಕ: 27–01–2011ರ ಸರ್ಕಾರದ ಆದೇಶದ ಮೂಲಕ Karnataka State Playing Fields Association ಎಂಬ ಸಂಸ್ಥೆಯನ್ನು ಪ್ರಾರಂಭಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿರುತ್ತದೆ. ಈ ಸಂಸ್ಥೆಯ ನಿರ್ವಹಣೆಗಾಗಿ ನಿಯಮಗಳನ್ನು ರಚಿಸುವ ಅವಶ್ಯಕತೆಯನ್ನು ಸರ್ಕಾರವು ಪರಿಗಣಿಸಿದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 109 ಯುಸೇಕ್ರೀ 2010 ಬೆಂಗಳೂರು ದಿನಾಂಕ: 26–05–2011**

ದಿನಾಂಕ: 27–01–2011ರ ಆದೇಶದ ಮೂಲಕ ಪ್ರಾರಂಭಿಸಲಾದ Karnataka State Playing Fields Association ಎಂಬ ಸಂಸ್ಥೆಯ ನಿರ್ವಹಣೆಗಾಗಿ Karnataka State Playing Fields Association Rules 2011 ಎಂಬ ನಿಯಮಗಳನ್ನು ಈ ಆದೇಶದ ಅನುಬಂಧದ ಪ್ರಕಾರ, ರಚಿಸಲು ಸರ್ಕಾರವು ಈ ಮೂಲಕ ಆದೇಶಿಸಿದೆ.

ದಿನಾಂಕ: 26–07–2010 ಸಂವ್ಯಶಾಇ 132 ಆಶಾರ 2010ನೇ ಸಂಖ್ಯೆಯ ಟಿಪ್ಪಣಿಯ ಮೂಲಕ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯು Memorandum of Association ಮತ್ತು The Karnataka State Playing Fields Association Rulesಗಳನ್ನು ಪರಿಶೋಧಿಸಿಕೊಟ್ಟಿರುವ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ

**ANNEXURE TO THE GOVERNMENT ORDER NUMBER: USEI 109 YUSEKRI 2010 DATED: 27-01-2010**

**RULES OF THE KARNATAKA STATE PLAYING FIELDS ASSOCIATION, BANGALORE**

KARNATAKA STATE PLAYING FIELDS ASSOCIATION:- Here in after referred to as the society shall be governed by its Memorandum of Association and these Rules and Regulations.

1. **TITLE:-** These Rules may be called "The Karnataka State Playing Fields Association rules, 2011".

2. **APPLICATION OF ACTS:-** All the provisions of the Karnataka societies Registration Act, 1960 (XVI of 1960) (Karnataka Societies Registration Act, 1960) as in force in the State of Karnataka shall apply to this Society.

3. **DEFINITIONS:**- In these Rules unless there be something in the subject of context inconsistent therewith:
   1. "Chairperson" means the Chairperson of the Society.
   2. "Chief Executive Officer" means Chief Executive Officer of the Society
   3. "FUND" means fund of the Society.
   4. "Member Secretary" means Member Secretary of the Society.
   5. "Office Bearer" includes the chairperson, the Vice Chairperson, Chief Executive Officer, and Member Secretary.
   6. The "Member" means the person, having been admitted to membership according to the Rules and Regulations of the society.
   7. The Society means "Karnataka State Playing Fields Association".
   8. "Vice Chairperson" means the Vice Chairperson of the Society.
   9. Words importing the Singular number include the plural number and Vice Versa.
   10. Words importing the masculine gender also include the feminine gender.

**4. MEMBERSHIP:**

1. The Society shall have the following members:-
   a) Minister of Textiles, Youth Services and Sports-Ex-officio chairperson.
   b) Secretary to Government of Karnataka, Dept of Youth Services Ex-Officio Vice Chairperson.
   c) Director of Youth Services and Sports-Ex-officio Member and Chief Executive Officer (CEO)
   d) Director General, Sports Authority of Karnataka-Ex-officio Member.
   e) Financial Advisor, Accounts Officer, Dept. of Youth Services and Sports-Ex-officio Member.
   f) Director of Youth Services and Sports-Ex-officio Member and member secretary.
   g) Eleven representatives from State Government-Ex-officio Members.
   h) President, Karnataka Olympic Association-Ex-officio Member.
   i) Secretary, Karnataka State Amature Athletic Association-Ex-officio Member.
   j) Seven eminent persons to be nominated by Chiarperson Nominated Members.
   k) Six Sports Administers-Eminent Sports Persons to be nominated by the Chairperson-Members.

II. The Society Shall consist of not less than Nine Members. The duration of membership for a nominated member is three years from date of his nomination unless re-nominated at the end of the period.

III. No membership fees shall be charged from the members.

IV. Any nominated member may resign from his or her membership of the Society by giving Seven days notice in writing of his or her intention to do so, addressed to the chairperson of the Society.

V. The Society will maintain at its Registered Office a register of its members and shall enter therein, within 15 days, after admission of members of association of his/her membership with the following.
   1. Name and addressed of the Members.
   2. Date on which the member was admitted.
   3. The date on which a member was ceased to be a member.

VI. A Member shall cease to be the member of the Society.
   i. If he resigns from the membership by giving notice in writing to the Society.
   ii. If he/she is expelled from the membership of the society under the Rules and Regulation of the Society.

4. **EXPULSION:** The Governing body of the Society may expel any member from the society on the following grounds:
   **i.** If the member works against the aims and objects of the society;
   And
   iii. If the member fails to attend three meetings of general body continuously without intimation.

A show cause notice with two weeks time to give reply will be served before any explusion or termination against any member of the society is intiated.

5. **APPEAL:** All the appeals in case of expulsion of any member shall be referred to the Governing Body of the society. The decision of the Governing body shall be final. The reason for rejection shall be communicated to the member concerned.

6. **RIGHTS AND PRIVILEGES OF THE MEMBER:** Every member shall have the right to participate in the General body meetings and shall be entitled to inspect the records of the society with prior approval of the Governing Body. Besides this, he/she shall have the right to vote in the meetings of the society. Every member shall be entitled to participate in the meetings, functions and get together.

7. **POWERS OF THE GOVERNING BODY:**
   a. The Chairperson of the Governing Body may co-opt or invite from time to time. Additional members from the society as may be necessary, for the purpose of a meeting provided that the total numbers of members so co-opted or invited shall not exceed five.

b. The Governing Body shall generally pursue and carry out the objects of the society as set forth in the Memorandum of its association and in doing so, shall follow and implement the policy directions and guidelines laid down by the Government of Karnataka.

c. The Governing Body shall exercise all administrative and financial powers of the society, including those vested in or conferred on it by or under any statute subject nevertheless in respect of expenditure of such limitation in the Government of Karnataka may, from time to time impose.

d. In particular and without prejudice to the generally of the foregoing provisions, the Governing Body shall have the powers, subject to the provision of these Rules and Bye-Laws framed hereunder to.

i. Accept and collect donations, Grants, Gifts and to undertake management of any endowment or trust fund and to make donations, grants and gifts for the purpose of the Society.

ii. Accept and receive in any manner whatsoever, any cash or immovable or movable property either unconditionally or subject to any special trust created by any particular donor in furtherance of any one or more of the object of the Society.

iii. Enter into arrangements with the Government of Karnataka and through the Government with Foreign and International agencies and organizations, the State Government and other bodies or organizations for the furtherance of the objects of the Society.

iv. Appoint all staff as may be needed for the Society on such terms and conditions as may be deemed fit and proper subject further to such terms and conditions as the Government of Karnataka, may if it so desires, prescribe from time to time.

v. The posts under the Society and the scales of pay to which the holders of the said posts shall be respectively entitled shall be subject to such orders as may be issued by the Society with prior approval of the State Government from time to time..

vi. Determine the proportion of total funds at its disposal which shall be applied for the objects of the Society in a particular year.

vii. Finalize the annual and supplementary budget estimates with such modifications as may be deemed necessary.

viii. Prepare the Annual Report of Accounts of the Society for presentation together with the audit Report thereon, at the Annual General Meeting of the Society.

ix. Subject to the approval of the Government of Karnataka make and from time to time amend and repeal such rules and bye-laws as may be recessary for administering and regulating the affairs of the Society and

x. Delegate such administrative, financial and other powers to the Chief Executive Officer (CEO), the Member Secretary and any other officer of the Society as it may consider necessary and proper.

**8. GENERAL BODY MEETING:**

i. The Society shall, in each year, hold a General Body Meeting of the members as its Annual General Meeting. The first general meeting shall be held within 180 days after the date of the Registration of the society, and subsequent annual general meeting shall be held in month of March of each succeeding year. The society may, in addition, hold General Meetings other than annual meeting and the said other meetings shall be called extraordinary general meetings of the Society may be called by the Chairperson or by a resolution passed by the Governing Body.

ii. The Chairperson shall summon the general body meetings by notice in writing to members sent 14 days before the date of meetings. The Chairperson shall decide the date of meetings, its location and also fix the agenda and preside over the meeting.

iii. The Chairperson can call an extraordinary General Body Meetings at a short notice in case of urgency.

iv. The quorum of the Annual General Meeting and the extraordinary meeting shall be one third of the total membership.

v. If within half an hour from the time appointed for holding a meeting the quorum is not present, the meeting shall stand adjourned to the same day in the next week, at the same time and place or as the Chairperson of the meeting may determine.

vi. If the adjourned meeting, a quorum is not present within half an hour from the time appointed for holding the meeting the members present shall be the quorum.

vii. In the absence of the Chairperson the meeting shall be chaired by the Vice Chairperson who shall be deemed to be Chairperson of that meeting.

viii. All questions coming up before the meeting shall be decided by consensus, failing which by a majority of votes of the Members present and in the case of equality of votes, the person presiding over the meeting shall have a second or casting vote.

ix. The Chairperson shall have, full authority to conduct the meeting, including the authority to decide the admissibility of any question, expunging any remarks, directing the conclusion of debate and putting any motion to vote. The Chairperson's decision would be final.

**9. MEETING Of GOVERNING BODY:**

The meeting of the Governing Body shall be held once in every quarter of the year and the quorum shall be one third. The noticed period of Governing Body meeting shall be 14 days. An emergency meeting of the Governing Body may also be summouned on the written request of 3/5th members with ten days prior notice for such meetings.

**10. Office Bearers and Their Duties**

**i. CHAIRPERSON**

a. Chairperson shall preside over the meetings of the Society. He shall also preside over the meetings of Governing Body and exercise general supervision over society.

b. In case of equality of votes in any meeting he/she casting vote.

ii. **Vice Chairperson:**

In the absence of the chairperson, he/she will carry out the functions entrusted to the chairperson.

iii. **Chief Executive Officer:**

a. The Commissioner/Director Youth Services and Sports, Department of Youth Services and Sports, Government of Karnataka shall be Ex-Officio Chief Executive Officer of the Society.

**b.** The Governing Body may entrust to and confer upon the Chief Executive Officer any of the power exercisable by it, upon such terms and conditions and with such restrictions, as they may deem fit either collaterally with or to the exclusion of their own power and may from time to time, revoke, withdraw or alter or vary all or any of such powers.

**c.** The Chief Executive Officer shall have the right to delegate any of the powers to such managers, agents or other persons as he may deem fit and at his discretion may revoke such powers.

**d.** The Chief Executive Officer shall have power of general direction, management, superintendence of the affairs of the Society with full power to do all such acts in a maner deemed necessary, proper and expedient for carrying on the affairs of the society and to make and sigh all such contracts papers documents that shall be necessary, proper or expedient for the authority of the society expect only such of those prohibited by Act or expressively directed to be exercised by the Governing Body.

**e.** To receive, to have custody and to spend the funds of the Society and to manage the property of the Society.

**f.** To invest and deal with any funds of the Society in or upon such securities as the society may deem fit and from time to time transpose any investments.

**g.** Make, draw, accept, endrose and negotiate respectively promissory notes, bills, cheques or other negotiable instruments.

**h.** To keep necessary cash in hand and to deposit excess funds from time in bank of account.

**i.** To pass the necessary expenditure to meet the day requirement of the society.

**j.** To sue and to defend all legal proceedings on behalf of the society.

**k.** To take all such legal steps which may appear beneficial for the smooth and better management of the society.

**l.** To appoint, terminate and fix duties of staff for necessary smooth running of the Society.

iv. **Member Secretary:**

i. He/she shall represent the society in all public and private offices.

ii. He/she shall keep all type of records of the Society including the register of the members containing therein the names, address and other brief particulars.

iii. He/she shall undertake all type of correspondence on behalf of the society and shall have the right of singing any documents related to such activities.

iv. He/she shall convene the meetings of General Body and Governing Body.

v. He/she shall also inform every member regarding time, date and place of the meeting through a written notice and shall keep minutes of all such meeting.

vi. He/she shall take steps for implementation of the decision taken up at General/Governing Body meetings of the Society.

vii. He/she shall be responsible for keeping and maintenance of true and correct accounts of the society funds.

viii. He/she shall exercise such powers, and execute such other functions as may be assigned by the Governing Body.

**11. SUB COMMITTEE**

The Chairperson in consultation with the Governing Body may appoint and dissolve Committees and Sub-Committees consisting of persons who may or may not be members of the Governing body or employees of the Society, for the purpose of the Society.

**12.** The Sociey shall create a FUND for furtherance of its objectives. The Ministry of Youth affairs and Sports will provide a One-Time seed capital of Rs. 50 lakhs for the purpose. The Society shall further accept grants and contribution from the Central Government and State Government, Public/Private Sector, Non-Governmental Organization, general public, high net worth individuals, International Organizations etc. either in cash or cheque or in kind.

**13. Objectives of the Fund:**

The Fund shall be utilized for the following objectives:

i. To provide financial assistance to develop, manage, equip and maintain Playing fields, playgrounds and open spaces which meant for public use.

ii. To provide financial assistance to make Playing fields, playgrounds and open spaces disabled friendly.

iii. To provide legal aid to save Playing fields form being diverted converted for other uses.

iv. To undertake, hire or outsource activities for furthering the objectives of the Society:

v. To do all other things which are incidental to the above objectives.

**14. PROCEDURE FOR GRANT OF ASSISTANCE; APPLICATION TO THE SOCIETY**

i. An application for financial assistance from the society shall be addressed to the Member-Secretary.

ii. All applications for financial assistance from the society shall be considered and disposed of by the Governing Body and where the Governing Body is not meeting in near future for any reason, the applications so received may be considered and disposed of even by circulation, by a committee consisting of the Chairperson and two other members of the Committee to be nominated by the Chairperson of the Committee.

iii. In case of urgency, the Chairperson of the Committee may consider and dispose of such an application.

iv. Power to stop grant the Chairperson may, if he/she thinks it necessary to do so and for reasons to be recorded in writing, withhold or reduce any undisbursed grant, whether of a recurring or a non-recurring nature.

**15. BANK ACCOUNT:**

i. The Society shall maintain its account with Nationalized Banks in the name of the Society. The Chief Executives Officer will decide the operation of the bank account(s).

ii. The funds with the Society that are not required to be used immediately for the objects of the society, may be invested in any one or more of the modes of investments for the time being authorized by law for the investment of the trust funds as may be determined by the Chief Executive Officer.

**16. WITHDRAWAL OF FUNDS:**

Any withdrawal of funds from the accounts of the Society shall be regulated in the manner to be determined by the Governing Body Such withdrawal shall be made by cheques/requisitions (as the case may be) signed by the Member-Secretary in the case of an amount not exceeding Rs. 5,000/- and signed duly by the Chief Executive Officer and Member Secretary in all other cases.

**17. FINANCIAL YEAR:**

For accounting purpose, the financial year of the society will be coterminus with that of the Government of Karnataka.

**18. ACCOUNTS AND AUDIT:**

The Member Secretary shall maintain accounts of all funds received and money expended by the Society and of all the matters in respect of which such receipts and expenditure take place and of the assets, credits and liabilities of the Society.

Once at least in every year the accounts of the Society shall be examined and the correctness of the Income and Expenditure account and balance sheet ascertained by auditors.

The first auditors of the society shall be noted-by the Governing Body who shall hold the office till conclusion of the first annual general meeting of the Society.

The remuneration of auditors shall be fixed by the society in the Annual General Meeting except, that remuneration of the auditors appointed, by the Governing Body shall be fixed by the Governing Body.

**19. ANNUAL REPORT**

As annual report on the working of Society shall be prepared by the Member-Secretary and shall after approval of the Governing Body, be presented to the Government of Karnataka.

**20. DECISION OF DISPUTE:**

i. Every dispute between the Members in respect of any difference or question relating to working of this Memorandum shall be decided by the Chairperson as decision so given shall be binding and conclusive.

ii. Any question, dispute of difference arising out of this Memorandum of Association shall be subject to the jurisdiction of the court exercising civil jurisdiction in the High Court, Bangalore.

**21. REMUNERATION TO MEMBERS AND OFFICERS**

i. No remuneration shall be paid to any of the members of the Governing Body except sitting fees, travelling and daily allowance at rates to be determined by the Governing Body.

ii. The Official members of the committee shall only draw travelling and daily allowances at rates admissible to them from the source from which they draw their allowance for said purpose.

iii. The Officers and Staff of the Committee may draw such remuneration or allowance and daily allowance to which they may be entitled under rules to them for the purpose.

**LEGAL PROCEEDINGS (Section 6 of the Act):** The Society may sue or be sued in the name of the Chief Executive Officer as per provisions laid down under section 6 of the Societies Registration Act, 1960 as applicable to the State of Karnataka.

22. **AMENDMENT (Section 12 & 12a of the Act):** Any amendment in the Memorandum of rules will be carried out in accordance with the procedure laid down in section 12 & 12a of the Societies Registration Act, 1960.

23. **DISSOLUTION AND ADJUSTMENT OF AFFAIRS (Section 13 & 14 of the Act):** If the Society need to be dissolved, it shall be dissolved as per provisions laid down in section 13 & 14 of the Societies Registration Act, 1960 as applicable to the State of Karnataka. On winding up or dissolution of the Society, after clearing its debts and Liabilities, if any, any profit remaining with the Society will be deposited with Government of Karnataka.

24. **INDEMINITY:** Subject to the provision of the Societies Registration Act 1860, the Chairperson, Vice-Chairperson and other office bearers for the time being of the society being acting in relation to any of the affairs of the society and their heirs and their executors shall be indemnified out of the assets and fund of the Society from and against all bonfide suits, proceedings, costs charges, loss, damages and expenses which they or any of them shall or may incur or sustain by reasons of any act done or committed in or about the execution of their duties in their respective offices except those done thorugh their willful neglect or default.

25. **ESSENTIALITY CERTIFICATES:** Certified that this is the correct and authentic copy of the Rules of the society.

**C. Srinivas**
Under Secretary to Government
Youth Services Department

ಪಿ.ಆರ್. ನಂ. 1453

## ಆರ್ಥಿಕ ಸಚಿವಾಲಯ

ವಿಷಯ: ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವರ್ಗಾವಣೆ – ಅರ್ಜಿ ಸಂಖ್ಯೆ: 1695/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ ಪ್ರಕರಣದ ಮರುಪರಿಶೀಲನೆ ಆದೇಶ ಹೊರಡಿಸುವ ಬಗ್ಗೆ.

ಓದಲಾಗಿದೆ:
1) ಅಧಿಸೂಚನೆ ಸಂಖ್ಯೆ: ಆಇ 104 ಆಖಇ 2009 ದಿನಾಂಕ: 05–09–2009.
2) ಅಧಿಸೂಚನೆ ಸಂಖ್ಯೆ: ಆಇ 167 ಆಖಇ 2009 ದಿನಾಂಕ: 23–01–2010.
3) ಅರ್ಜಿ ಸಂಖ್ಯೆ: 1695/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿದ ದಿನಾಂಕ: 06–10–2010ರ ಆದೇಶ.

**ಪ್ರಸ್ತಾವನೆ:**

ಜಿಲ್ಲಾ ಖಜಾನಾಧಿಕಾರಿ, ಕೊಪ್ಪಳ ಈ ಹುದ್ದೆಯಲ್ಲಿ ದಿನಾಂಕ: 03–05–2004 ರಿಂದ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಸಿ. ವಿನಯಕುಮಾರ್ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ: 05–9–2009ರ ಅಧಿಸೂಚನೆಯಲ್ಲಿ ವರ್ಗಾಯಿಸಿ ಜಿಲ್ಲಾ ಖಜಾನಾಧಿಕಾರಿ, ಉಡುಪಿ ಈ ಹುದ್ದೆಗೆ ನೇಮಿಸಲಾಯಿತು. ಇದನ್ನು ಪ್ರಶ್ನಿಸಿ ಅಧಿಕಾರಿಯು ಸಲ್ಲಿಸಿದ ಅರ್ಜಿ ಸಂಖ್ಯೆ: 4075/2009ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 09–09–2009 ರಂದು ನೀಡಿದ ಆದೇಶದಂತೆ ಅಧಿಕಾರಿಯ ದಿನಾಂಕ: 08–09–2009ರ ಮನವಿಯನ್ನು ಪರಿಗಣಿಸಿದ ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ: 23–01–2010ರ ಅಧಿಸೂಚನೆ ಹೊರಡಿಸಿ ಅವರನ್ನು ಜಿಲ್ಲಾ ಖಜಾನಾಧಿಕಾರಿ, ಉಡುಪಿ ಈ ಹುದ್ದೆಗೆ ದಿನಾಂಕ: 05–09–2009ರ ಅಧಿಸೂಚನೆಯಲ್ಲಿ ವರ್ಗಾಯಿಸಿದ್ದನ್ನು ಸ್ಥಿರೀಕರಿಸಲಾಯಿತು. ಈ ಕ್ರಮವನ್ನು ಪ್ರಶ್ನಿಸಿ ಶ್ರೀ ಸಿ. ವಿನಯಕುಮಾರ್ ಅವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 1695/2010ನ್ನು ಸಲ್ಲಿಸಿದರು. ಮಂಡಳಿಯು ತನ್ನ ದಿನಾಂಕ: 01–03–2010ರ ಮಧ್ಯಂತರ ಆದೇಶ ಹೊರಡಿಸಿ ದಿನಾಂಕ 23–01–2010ರ ಅಧಿಸೂಚನೆಗೆ ಮಧ್ಯಂತರ ತಡೆಯಾಜ್ಞೆ ನೀಡಿತು. ಆನಂತರ ಮೇಲೆ (3)ರಲ್ಲಿ ಓದಲಾದ ದಿನಾಂಕ: 06–10–2010ರ ತನ್ನ ಆದೇಶದಲ್ಲಿ ಈ ಕೆಳಕಂಡ ನಿರ್ದೇಶನದೊಡನೆ ಅರ್ಜಿಯನ್ನು ಇತ್ಯರ್ಥಗೊಳಿಸಿದೆ.

(i) The Application is disposed of;

(ii) The Respondent Nos. 1 & 2 & CMA are directed to review and reconsider the case of the Applicant for transfer taking into account the facts relating to the Applicant with reference to the provisions contained in para 6.1 (3) and para 7.1(f) of the Government Order dated 22-11-2001 relating to transfers and pass an appropriate order in accordance with law as per the Government Order dated 22-11-2001 and related Government Orders and Circulars within 4 weeks from the date of receipt of the certified copy of this order by the Respondent Nos. 1 and 2;

(iii) The interim order of stay of the impugned order No. ಆಇ 167 ಆಖಇ 2009, dated 23-01-2010 granted shall be continued till the CMA takes a decision as directed in para (ii) above and appropriate order is passed in pursuance to the recommendation of the CMA in this regard.

ಮಂಡಳಿಯ ಮೇಲಿನ ಆದೇಶದಿಂದಾಗಿ ವೃಂದ ನಿರ್ವಹಣಾ ಪ್ರಾಧಿಕಾರವು ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ ಅವರ ಪ್ರಕರಣವನ್ನು ದಿನಾಂಕ: 22–11–2001ರ ಆದೇಶದ ಬೆಳಕಿನಲ್ಲಿ ಪರಿಶೀಲಿಸಿದೆ. ಆದೇಶದ ಕಂಡಿಕೆ 6.1(3)ರನ್ವಯ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಪದಾಧಿಕಾರಿಯಾಗಿರುವ ಸರ್ಕಾರಿ ನೌಕರನನ್ನು ಆತನು ಚುನಾಯಿತನಾಗಿರುವ ಅವಧಿ ಮುಗಿಯುವವರೆಗೂ ಆತನನ್ನು ವರ್ಗಾಯಿಸುವಂತಿಲ್ಲ. ಕಂಡಿಕೆ 7(1)(ಎಫ್)ರನ್ವಯ ಇಲಾಖಾ ವಿಚಾರಣಾ ಕ್ರಿಮಿನಲ್ ಮೊಕದ್ದಮೆ ಹೂಡಿರುವ ಇಲ್ಲವೇ ಹೂಡುವ ಪ್ರಸ್ತಾವನೆ ಇರುವ ಪ್ರಕರಣಗಳಲ್ಲಿ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡುವುದಕ್ಕೆ ಬದಲಾಗಿ ವರ್ಗಾವಣೆ ಮಾಡಬಹುದೆಂದು ನೇಮಕಾತಿ ಪ್ರಾಧಿಕಾರ ಅಭಿಪ್ರಾಯ ಪಟ್ಟಲ್ಲಿ ಅಂತಹ ನೌಕರನನ್ನು ವರ್ಗಾಯಿಸಬಹುದು. ಈ ಅಂಶಗಳನ್ನು ಪರಿಗಣಿಸಿದಲ್ಲಿ ಶ್ರೀ ಸಿ. ವಿನಯಕುಮಾರ್ ಅವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಕೊಪ್ಪಳ ಜಿಲ್ಲಾ ಶಾಖೆಗೆ ಖಜಾನೆ ಇಲಾಖೆ ವತಿಯಿಂದ 2007–12ನೇ ಸಾಲಿಗೆ ಚುನಾಯಿತರಾಗಿದ್ದು ಪ್ರಥಮ ಬಾರಿಗೆ ಸಂಘಟನಾ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯಾಗಲೀ, ಕ್ರಿಮಿನಲ್ ಮೊಕದ್ದಮೆಯಾಗಲೀ ಬಾಕಿ ಇರುವುದಿಲ್ಲ. ಸರ್ಕಾರಿ ನೌಕರರು ಸಂಘದ ಪದಾಧಿಕಾರಿಗಳಾಗಿದ್ದಲ್ಲಿ ಅವರನ್ನು ಅವಧಿ ಮುಗಿಯುವವರೆಗೆ ವರ್ಗಾಯಿಸಬಾರದೆಂದು ವರ್ಗಾವಣೆ ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿದೆ.

ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ ಅವರು ಎ ಗುಂಪಿನ ಅಧಿಕಾರಿಯಾಗಿದ್ದು ಕೊಪ್ಪಳದಲ್ಲಿ ದಿ: 03–05–2004 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ದಿ: 22–11–2001ರ ಸರ್ಕಾರಿ ಆದೇಶದ ಕಂಡಿಕೆ 3.2 ರಲ್ಲಿ ನಿಗಧಿಪಡಿಸಿರುವ ಕನಿಷ್ಟ 3 ವರ್ಷಗಳ ಅವಧಿಯನ್ನು ಕೊಪ್ಪಳದಲ್ಲಿ ಪೂರೈಸಿದ್ದಾರೆ. ಆದಾಗ್ಯೂ ಸಾರ್ವಜನಿಕ ದೂರಿನ ಮೇರೆಗೆ ಇವರನ್ನು ವರ್ಗಾವಣೆ ಮಾಡಿರುವುದರಿಂದ ಅವರನ್ನು ಕೊಪ್ಪಳದಲ್ಲಿಯೇ ಮುಂದುವರಿಸುವುದು ಆಡಳಿತಾತ್ಮಕ ಹಿತದೃಷ್ಟಿಯಿಂದ ಸೂಕ್ತವಾಗುವುದಿಲ್ಲ. ಈ ಎಲ್ಲಾ ಅಂಶಗಳನ್ನು ಅರ್ಜಿ ಸಂಖ್ಯೆ: 1695/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿ: 06–10–2010 ರಲ್ಲಿ ನೀಡಿದ ಆದೇಶವನ್ನು ಗಮನದಲ್ಲಿಟ್ಟುಕೊಂಡು ವೃಂದ ನಿರ್ವಹಣಾ ಪ್ರಾಧಿಕಾರವು ಪರಿಶೀಲಿಸಿ ಸಲ್ಲಿಸಿರುವ ಅಭಿಪ್ರಾಯವನ್ನು ಒಪ್ಪಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 73 ಆಖಇ 2010 ಬೆಂಗಳೂರು ದಿನಾಂಕ: 31–05–2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ವಾಸ್ತವಾಂಶಗಳಿಂದಾಗಿ ಸರ್ಕಾರವು ಅಧಿಸೂಚನೆ ಸಂಖ್ಯೆ: ಆಇ 104 ಆಖಇ 2009 ದಿ: 05–09–2009ರಲ್ಲಿ ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ ಅವರನ್ನು ಕೊಪ್ಪಳ ಜಿಲ್ಲಾ ಖಜಾನೆಯಿಂದ ಉಡುಪಿ ಜಿಲ್ಲಾ ಖಜಾನೆಗೆ ವರ್ಗಾಯಿಸಿರುವುದನ್ನು ಜಾರಿಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 1454

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ: ನಗರಾಭಿವೃದ್ಧಿ ಇಲಾಖೆಯ ಕಡತಗಳು ಕಾಣೆಯಾಗಿರುವುದಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಂಡ ಅಧಿಕಾರಿ/ನೌಕರರ ಜೀವನಾಧಾರ ಭತ್ಯೆಯನ್ನು ಪರಿಷ್ಕರಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2010, ದಿನಾಂಕ: 04–09–2010.

2) ಶ್ರೀ ಎಸ್.ಜೆ. ಸಂಪತ್‌ಕುಮಾರ್, ಅಧೀನ ಕಾರ್ಯದರ್ಶಿ, (ಅಮಾನತ್ತಿನಲ್ಲಿ) ಇವರ ಮನವಿ ದಿನಾಂಕ: 6–4–2011 ಹಾಗೂ 24–4–2011.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಗರಾಭಿವೃದ್ಧಿ ಇಲಾಖೆಯಲ್ಲಿ ಕಡತಗಳು ಕಾಣೆಯಾಗಿರುವುದಕ್ಕೆ ಸಂಬಂಧಿಸಿದಂತೆ ಶ್ರೀ ಎಸ್.ಜೆ. ಸಂಪತ್‌ಕುಮಾರ್ ಅಧೀನ ಕಾರ್ಯದರ್ಶಿ, ಹಾಗೂ ಇತರೇ 5 ಅಧಿಕಾರಿ ನೌಕರರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ. ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಮನವಿಯಲ್ಲಿ ತಮ್ಮನ್ನು ಅಮಾನತ್ತುಗೊಳಿಸಿ 6 ತಿಂಗಳು ಮೀರಿರುವುದರಿಂದ ತಮಗೆ ನೀಡುತ್ತಿರುವ ಜೀವನಾಧಾರ ಭತ್ಯೆಯನ್ನು ಹೆಚ್ಚಿಸಬೇಕೆಂದು ಕೋರಿ ಅಮಾನತ್ತುಗೊಂಡ ಅಧಿಕಾರಿ/ನೌಕರರುಗಳು ಮನವಿಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2010 ಬೆಂಗಳೂರು ದಿನಾಂಕ: 01–06–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ ನಿಯಮ 98(2) (ಬಿ) ರನ್ವಯ ಪ್ರಸ್ತುತ ಅಮಾನತ್ತಿನಲ್ಲಿರುವ ಈ ಕೆಳಕಂಡ ಅಧಿಕಾರಿ/ನೌಕರರುಗಳು ಜೀವನಾಧಾರ ಭತ್ಯೆಯನ್ನು ದಿನಾಂಕ: 04–03–2011 ರಿಂದ ಜಾರಿಗೆ ಬರುವಂತೆ ಪ್ರಸ್ತುತ ನೀಡಲಾಗುತ್ತಿರುವ ಶೇಕಡ 50 ರಿಂದ ಶೇಕಡ 75 ರಷ್ಟಕ್ಕೆ ಹೆಚ್ಚಿಸಿ ಆದೇಶಿಸಿದೆ.

1. ಶ್ರೀ ಎಸ್.ಜೆ. ಸಂಪತ್‌ಕುಮಾರ್ (ಹಿಂದಿನ ಶಾಖಾಧಿಕಾರಿ ನಗರಾಭಿವೃದ್ಧಿ)
   ಪ್ರಸ್ತುತ ಅಧೀನ ಕಾರ್ಯದರ್ಶಿ ಇಂಧನ ಇಲಾಖೆ.
2. ಶ್ರೀ ಶಾಂತಾರಾಮ್ ನಾಯಕ್ ಶಾಖಾಧಿಕಾರಿ ನಗರಾಭಿವೃದ್ಧಿ ಇಲಾಖೆ.
3. ಶ್ರೀ ಟಿ. ಹಾಲಸಿದ್ದಪ್ಪ (ಹಿಂದಿನ ಸಹಾಯಕರು ನಗರಾಭಿವೃದ್ಧಿ ಇಲಾಖೆ)
   ಪ್ರಸ್ತುತ ಹಿರಿಯ ಸಹಾಯಕರು, ಸಿ.ಆ.ಸು.ಇ. (ಸೇವೆಗಳು–ಡಿ)

4. ಶ್ರೀ ಜಗದೀಶರೆಡ್ಡಿ (ಹಿಂದಿನ ಸಹಾಯಕರು, ನಗರಾಭಿವೃದ್ಧಿ ಇಲಾಖೆ)
   ಪ್ರಸ್ತುತ ಹಿರಿಯ ಸಹಾಯಕರು, ಮಾನ್ಯ ಪ್ರವಾಸೋದ್ಯಮ ಸಚಿವರ ಆಪ್ತಶಾಖೆ
5. ಶ್ರೀ ಎಲ್. ರಮೇಶ್, ಸಹಾಯಕರು, ನಗರಾಭಿವೃದ್ಧಿ ಇಲಾಖೆ
6. ಶ್ರೀ ಟಿ.ಹೆಚ್. ಚಿಕ್ಕ ಹುಚ್ಚಯ್ಯ, ಕಿರಿಯ ಸಹಾಯಕರು, ನಗರಾಭಿವೃದ್ಧಿ ಇಲಾಖೆ.

ಅಮಾನತ್ತಿನ ಅವಧಿಯಲ್ಲಿ ಮೇಲ್ಕಂಡ ಅಧಿಕಾರಿ/ನೌಕರರುಗಳು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

ಪಿ.ಆರ್. ನಂ. 1455

## INFRASTRUCTURE DEVELOPMENT SECRETARIAT

**Sub:** Release of balance amount of Rs. 3,64,44,533/- in respect of land acquired for Tadri Port lands-reg.

**Read:**
1. G.O.No.: IDD 1 IDM 99, dated: 31-03-2001.
2. G.O.No.: IDD 89 IDM 2002, dated: 14-08-2002.
3. Letter No.: KIADB/ACQ 105 A-05-2010-11, dated: 20-11-2010 of CEO & EM, KIADB, Bangalore.

**PREAMBLE:**

In G.O. read at (1) above GoK had taken a decided to improve the Tadadi project, since.

1.Tadadi Port Project is a State Government Project conceived and conceptualized through IDD and KSIIDC is acting as a nodal agency of the Government. KIADB had acquired lands to an extent of 1854.29 acres in Kumta & Ankola talukas at a Total cost of Rs. 9,67,44,453/-.

2. In G.O. read at Sl.No.: 1 & 2 above Government has release Rs. 503/- lakhs and Rs. 100/- lakhs towards cost of land acquired in Kumta and Ankola for the said project. Hence the following.

3. Tadadi port is being developed on PPP basis. For preparation of DPA/Feasibility Report consortium of M/s. Prointec S.A & M/s. Mir Projects and consultants have been appointed as Technical consultants. The selection of the concessionaire and bid process is being done.

4. In the letter at Sl. No.: 3 above the Chief Executive Officer & EM, KIADB has requested to released the balance cost of land to the tune of Rs. 3,64,44,533/- Since the said amount is pending from 2001 onwards.

**Government Order No. IDD 89 IDM 2002 (P) Bangalore Dated: 31-05-2011.**

After careful consideration of the proposal sanction is hereby accorded for the release of Rs. 3,64,44,533/- to CEO & EM, KIADB being the balance cost of land in respect Tadri Port from the Head of Account No.: 5465-01-190-1-18 Tadadi Sea Port Project.

2. The CEO & EM, KIADB is authorized to draw the above amount on a payee's receipt counter signed by Under Secretary to Govt., IDD and shall provide utilization certificate for the amounts released in this G.O. and should also to provide the duly audited accounts for this sum after due audit by the competent auditors.

3. The order is issued in accordance with financial powers delegated to the Secretaries of the departments in G.O. No.: FD 1 TFP 2008, dated: 16-05-2008.

By Order and in the name of the Governor of Karnataka
**C.A. BABURAVINDRANATH PATEL**
Under Secretary to Government
Infrastructure Development Department.

PR No. 1456

## ಒಳಾಡಳಿತ ಸಚಿವಾಲಯ

ವಿಷಯ: ಶ್ರೀ ವೆಂಕಟೇಶ್ ಪಿ.ಎಸ್.ಐ. (ನಿವೃತ್ತ) ಯಶವಂತಪುರ ಪೊಲೀಸ್ ಠಾಣೆರವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

ಓದಲಾಗಿದೆ:
1) ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಅಪೀಲು (1)31/2007–08 ದಿನಾಂಕ 20–03–2008.
2) ಸರ್ಕಾರದ ಆದೇಶ ಸಂಖ್ಯೆ: ಒಇ 279 ಪೊಸಿಪ 2005 ದಿನಾಂಕ: 11–08–2008.
3) ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರುರವರ ಪತ್ರ ಸಂಖ್ಯೆ: ಅಪೀಲು (1)31/2007–08 ದಿನಾಂಕ 31–10–2009.
4) ಆರೋಪಿತರಿಗೆ ಕಾರಣ ಕೇಳುವ ನೋಟೀಸ್ ಅನ್ನು ಜಾರಿ ಮಾಡಿದ ದಿನಾಂಕ: 04–01–2010.
5) ಆರೋಪಿತರ ಸಮಜಾಯಿಷಿ ದಿನಾಂಕ: 16–11–2010.

6) ಕರ್ನಾಟಕ ಲೋಕಸೇವಾ ಆಯೋಗರವರ ಪತ್ರ ಸಂಖ್ಯೆ: ಪಿಎಸ್‌ಸಿ 228 ಸಿಎನ್‌ಎಸ್ 10 ದಿನಾಂಕ: 03–05–2011.

**ಪ್ರಸ್ತಾವನೆ:**

ನೆಲಮಂಗಲ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 274/2005 ಕಲಂ 341, 323, 506(ಬಿ) ಐಪಿಸಿ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷತೆ ತೋರಿದ ಶ್ರೀ ವೆಂಕಟೇಶ, ಪಿ.ಎಸ್.ಐ. (ನಿವೃತ್ತ) ರವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214(2)(ಬಿ) ಪ್ರಕಾರ ಆಪಾದಿತ ನೌಕರರ ವಿರುದ್ಧ ಈ ಕೆಳಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆಯನ್ನು ನಡೆಸಲು ಡಿ.ಎಸ್.ಪಿ. (ಡಿ.ಇ) ಕೇಂದ್ರ ವಲಯ, ಬೆಂಗಳೂರು ರವರನ್ನು ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ದಿನಾಂಕ: 11–08–2008 ರಂದು ಆದೇಶ ಹೊರಡಿಸಲಾಗಿತ್ತು.

**ದೋಷಾರೋಪಣೆ:**

1) ದಿನಾಂಕ: 13–09–2005 ರಂದು ನೆಲಮಂಗಲ ತಾಲ್ಲೂಕಿನ ಕಿತ್ತನಹಳ್ಳಿ ಗ್ರಾಮದ ವಾಸಿ ಶ್ರೀ ಕೆ.ಸಿ. ನಾಗರಾಜು ಎಂಬುವವರು ಬೆಂಗಳೂರು ನಗರದ ಯಶವಂತಪುರ ಪೊಲೀಸ್ ಠಾಣೆಗೆ ಬಂದು ದೂರು ನೀಡಿದಾಗ ನೀವು ಸದರಿ ದೂರನ್ನು ದಾಖಲಿಸಿಕೊಂಡು, ಪಿರ್ಯಾದುದಾರ ವಾಸವಾಗಿರುವುದು ನೆಲಮಂಗಲ ಪೊಲೀಸ್ ಠಾಣೆಯ ವ್ಯಾಪ್ತಿಯಾಗಿದ್ದರೂ, ಸದರಿ ಪ್ರಕರಣವನ್ನು ನೆಲಮಂಗಲ ಪೊಲೀಸ್ ಠಾಣೆಗೆ ವರ್ಗಾವಣೆ ಕೊಡದೆ ತಾವೇ ತನಿಖೆಯನ್ನು ವೈಯಕ್ತಿಕ ಆಸಕ್ತಿ ವಹಿಸಿ, ತನಿಖೆ ಕೈಗೊಂಡು ಅಧಿಕಾರ ದುರುಪಯೋಗ, ಕರ್ತವ್ಯ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

2) ದಿನಾಂಕ: 13–09–2005 ರಂದು ನೆಲಮಂಗಲ ತಾಲ್ಲೂಕಿನ ಕಿತ್ತನಹಳ್ಳಿ ಗ್ರಾಮದ ವಾಸಿಯಾದ ಶ್ರೀ ಕೆ.ಸಿ. ನಾಗರಾಜು ಎಂಬುವವರು ಯಶವಂತಪುರ ಪೊಲೀಸ್ ಠಾಣೆಗೆ ಹಾಜರಾಗಿ ನೀಡಿದ ದೂರಿನ ಮೇರೆಗೆ ಮೊ.ಸಂ.274/2005 ಕಲಂ 341 323, 506(ಬಿ) ಐಪಿಸಿ ಪ್ರಕರಣವನ್ನು ದಾಖಲಿಸಿಕೊಂಡು, ಆರೋಪಿಗಳು ನೆಲಮಂಗಲ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ರೌಡಿ ಶೀಟ್ ಜನರೆಂದು ತಿಳಿದಿದ್ದರೂ ಸರಿಯಾದ ಮುಂಜಾಗರೂಕತೆ ಕ್ರಮವನ್ನು ತೆಗೆದುಕೊಳ್ಳದೆ, ಪೊಲೀಸರನ್ನು ಮಫ್ತಿಯಲ್ಲಿ ಖಾಸಗಿ ವಾಹನದಲ್ಲಿ ಆರೋಪಿಗಳ ವಿರುದ್ಧ ಪಾರ್ಟಿಯವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಆ ಗ್ರಾಮದಲ್ಲಿ ಎರಡೂ ಪಾರ್ಟಿಗಳ ನಡೆವೆ ಮನಸ್ತಾಪವಿದೆಯೆಂದು ತಿಳಿದಿದ್ದರೂ ಸಹ ಅವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ, ಈ ಘಟನೆಗೆ ಮುಖ್ಯ ಕಾರಣವಾಗಿ ನೀವು ಅಧಿಕಾರ ದುರುಪಯೋಗ, ಕರ್ತವ್ಯ ನಿರ್ಲಕ್ಷತೆ ಮತ್ತು ಕರ್ತವ್ಯಲೋಪವೆಸಗಿರುತ್ತೀರಿ.

3) ನಿಮ್ಮ ಠಾಣೆಯಲ್ಲಿ ದಾಖಲಿಸಿದ ಪ್ರಕರಣದ ತನಿಖೆಗೆ ದಿನಾಂಕ: 27–09–2005 ರಂದು ರೌಡಿಗಳನ್ನು ದಸ್ತಗಿರಿ ಮಾಡಲು ಇಲಾಖೆಯ ವಾಹನವನ್ನು ಹಾಗೂ ಸಾಕಷ್ಟು ಸಮವಸ್ತ್ರದಲ್ಲಿದ್ದ ಪೊಲೀಸ್ ಸಿಬ್ಬಂದಿಗಳನ್ನು ತೆಗೆದುಕೊಂಡು ಹೋಗದೆ, ಆರೋಪಿಗಳ ವಿರುದ್ಧ ಪಾರ್ಟಿಯವರ ಖಾಸಗಿ ವಾಹನದಲ್ಲಿ ಹೋಗಿ ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಕರ್ತವ್ಯಲೋಪ ವೆಸಗಿರುತ್ತೀರಿ.

4) ದಿನಾಂಕ: 27–09–2005 ರಂದು ಆರೋಪಿಗಳನ್ನು ದಸ್ತಗಿರಿ ಮಾಡಲು ಹೋದ ಸಮಯದಲ್ಲಿ ಆರೋಪಿಗಳು ಕರ್ತವ್ಯದ ಮೇಲಿದ್ದ ಪೊಲೀಸರಿಗೆ ಕಲ್ಲುಗಳಿಂದ ಹೊಡೆದು, ಪೊಲೀಸರು ಕರ್ತವ್ಯವನ್ನು ಮಾಡಲು ಅಡಚಣೆಯನ್ನುಂಟು ಮಾಡಿ ಅವರ ಜೀವಕ್ಕೆ ಬೆದರಿಕೆಯನ್ನು ಹಾಕಿದ್ದು, ಅದನ್ನು ಸರಿಯಾಗಿ ನಿಭಾಯಿಸದೇ, ಪೊಲೀಸರನ್ನು ಗಲಭೆ ನಡೆಯುತ್ತಿದ್ದ ಸ್ಥಳದಲ್ಲಿಯೇ ಬಿಟ್ಟು ಗ್ರಾಮದಿಂದ ಓಡಿ ಬಂದು ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ತೋರಿಸಿರುತ್ತಾರೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಲಾಗಿರುತ್ತದೆ.

ಇಲಾಖಾ ವಿಚಾರಣಾಧಿಕಾರಿಗಳು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಂತೆ ವಿಚಾರಣೆ ನಡೆಸಿ ಶ್ರೀ ವೆಂಕಟೇಶ್, ಪಿ.ಎಸ್.ಐ. (ನಿವೃತ್ತ) ರವರ ಮೇಲಿನ ಆರೋಪಗಳು ಸಾಬೀತಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ. ಸದರಿ ಇಲಾಖಾ ವಿಚಾರಣಾ ವರದಿಯನ್ನು ಡಿಜಿ ಮತ್ತು ಐಜಿಪಿ ರವರು ಅನುಮೋದಿಸಿ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಲಾಗಿರುತ್ತದೆ.

ಸರ್ಕಾರವು ಇಲಾಖಾ ವಿಚಾರಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿದೆ. ತದನಂತರ ಶ್ರೀ ವೆಂಕಟೇಶ್, ಪಿ.ಎಸ್.ಐ. ಯಶವಂತಪುರ ಪೊಲೀಸ್ ಠಾಣೆ (ಹಾಲಿ ನಿವೃತ್ತ), ರವರಿಗೆ ದಂಡನೆಯನ್ನು ವಿಧಿಸಲು 2ನೇ ಕಾರಣ ಕೇಳುವ ನೋಟೀಸನ್ನು ಡಿಜಿ ಮತ್ತು ಐಜಿಪಿ ರವರ ಮುಖಾಂತರ ಜಾರಿ ಮಾಡಲಾಗಿರುತ್ತದೆ. ಆರೋಪಿತರು ದಿನಾಂಕ: 16–11–2010ರಂದು ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸಮಜಾಯಿಷಿಯಲ್ಲಿ ಒಪ್ಪಬಹುದಾದಂತಹ ಯಾವುದೇ ಹೊಸ ಅಂಶಗಳು ಇಲ್ಲದೆ ಇರುವುದರಿಂದ ಮೇಲೆ ಓದಲಾದ (6)ರ ಪತ್ರದಲ್ಲಿ ದಂಡನೆಯನ್ನು ವಿಧಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆಯಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 100 ಪೊಸಇ 2011 ಬೆಂಗಳೂರು, ದಿನಾಂಕ: 31–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ 214(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವೆಂಕಟೇಶ್, ನಿವೃತ್ತ ಪಿ.ಎಸ್.ಐ. ಇವರ ನಿವೃತ್ತಿ ವೇತನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಮಾಹೆಯಾನ ರೂ. 300/–ಗಳನ್ನು 3 ವರ್ಷಗಳ ಅವಧಿಯವರೆಗೆ ಕಟಾಯಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 1457

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

ವಿಷಯ: ಶ್ರೀ ಜೆ. ಪ್ರಕಾಶ್ ಕಮಲ್ ಕುಮಾರ್, ಪ್ರ.ದ.ಸ. ಪೊಲೀಸ್ ಕಮೀಷನರ್‌ರವರ ಕಛೇರಿ, ಮೈಸೂರು ನಗರ, ಹಾಲಿ ನ್ಯಾಯ ವಿಜ್ಞಾನ ಪ್ರಯೋಗಾಲಯ ಕಛೇರಿ, ಓಓಡಿ, ಡಿ.ಎನ್.ಎ. ಕೇಂದ್ರ, ಮಡಿವಾಳ, ಬೆಂಗಳೂರು ನಗರ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

ಓದಲಾಗಿದೆ:
1) ದೋಷಾರೋಪಣಾ ಪತ್ರ ದಿನಾಂಕ: 08-04-2009.
2) ದೋಷಾರೋಪಣೆಗೆ ಸಮಜಾಯಿಷಿ ದಿನಾಂಕ: 17-04-2009.
3) ಶಿಸ್ತು ಪ್ರಾಧಿಕಾರಿಯವರು ಹೊರಡಿಸಿದ ಅಂತಿಮ ಆದೇಶ ಸಂಖ್ಯೆ: ಶಿಕ್ಷೆ/33/2008-09 ದಿನಾಂಕ: ಒಇ 19/2009-10 ದಿನಾಂಕ: 12-05-2009.
4) ಶ್ರೀ ಜೆ. ಪ್ರಕಾಶ್ ಕಮಲ್ ಕುಮಾರ್, ಪ್ರ.ದ.ಸ. ರವರ ಮೇಲ್ಮನವಿ ಅರ್ಜಿ ದಿನಾಂಕ: 11-08-2009.
5) ಮೇಲ್ಮನವಿ ಪ್ರಾಧಿಕಾರಿಗಳ ಆದೇಶ ಸಂಖ್ಯೆ: ಅಪೀಲು (4)42/2009-10 ದಿನಾಂಕ: 03-12-2009.
6) ಪರಿಷ್ಕರಣ ಮೇಲ್ಮನವಿ ದಿನಾಂಕ: 03-04-2010.

**ಪ್ರಸ್ತಾವನೆ:**

ಶ್ರೀ ಜೆ. ಪ್ರಕಾಶ್ ಕಮಲ್ ಕುಮಾರ್, ಪ್ರ.ದ.ಸ. ಪೊಲೀಸ್ ಕಮೀಷನರ್‌ರವರ ಕಛೇರಿ, ಮೈಸೂರು ಇವರು ತಮ್ಮ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀಮತಿ ಎಂ.ಎನ್. ಶಾರದ, ದ್ವಿ.ದ.ಸ. ಮತ್ತು ಶ್ರೀಮತಿ ಸುನಿತಾ, ಬೆರಳಚ್ಚುಗಾರ್ತಿರವರೊಂದಿಗೆ ಅನುಚಿತವಾಗಿ ವರ್ತಿಸಿದ್ದರಿಂದ ಸದರಿಯವರಿಗೆ ಪೊಲೀಸ್ ಕಮೀಷನರ್, ಮೈಸೂರು ನಗರ ರವರು ಕೆ.ಸಿ.ಎಸ್. (ಸಿಸಿಎ) ನಿಯಮ 1957ರ ನಿಯಮ 12ರ ಅಡಿಯಲ್ಲಿ ದಿನಾಂಕ: 08-04-2009 ರಂದು ಈ ಕೆಳಕಂಡಂತೆ ದೋಷಾರೋಪಣೆ ಪತ್ರವನ್ನು ಹೊರಡಿಸಿರುತ್ತಾರೆ.

1. ಶ್ರೀ ಜೆ. ಪ್ರಕಾಶ್ ಕಮಲ್ ಕುಮಾರ್, ಪ್ರ.ದ.ಸ. ಒಓಡಿ, ಸಹಾಯಕ ಪೊಲೀಸ್ ಆಯುಕ್ತರ ಕಛೇರಿ, ಕೃಷ್ಣರಾಜ ಉಪವಿಭಾಗ, ಮೈಸೂರು ನಗರ ರವರು ತಮ್ಮ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀಮತಿ ಎಂ.ಎನ್. ಶಾರದ, ದ್ವಿ.ದ.ಸ.ರವರಿಗೆ ದಿನಾಂಕ: 31-12-2008 ರಂದು ದೂರವಾಣಿ ಸಂಖ್ಯೆ: 9341421215 ಗೆ ಫೋನ್ ಮಾಡಿ "ನಾಳೆ ನಾನು ನಿಮ್ಮ ಮನೆಗೆ ಬಂದು ಸ್ವೀಟ್ಸ್ ಕೊಡುತ್ತೇನೆ" ಎಂದು ಹೇಳಿದ್ದು, ಅದನ್ನು ಅವರು ತಿರಸ್ಕರಿಸಿದಾಗ, ಎಷ್ಟು ಹೊತ್ತಿಗೆ ಬರಲಿ ಎಂದು ತಿಳಿಸಿದರೆ ಆಗ ಬರುತ್ತೇನೆ ಎಂದು ಮತ್ತೆ ಕೇಳಿದಾಗ ಅವರು ಬೇಸರಗೊಂಡು ಫೋನ್ ಕರೆಯನ್ನು ಆಫ್ ಮಾಡಿರುತ್ತಾರೆಂದು ಮತ್ತು ಶ್ರೀಮತಿ ಎಂ.ಎನ್. ಶಾರದ ರವರು ನಿಮ್ಮ ದೂರವಾಣಿ ಕರೆಗಳನ್ನು ಸ್ವೀಕರಿಸದೆ ಇದ್ದಾಗ, ಬೇರೆ ದೂರವಾಣಿಯಿಂದಲೂ ಕರೆಗಳನ್ನು ಮಾಡಿರುತ್ತೀರಿ. ನಿಮ್ಮ ಫೋನ್ ಕರೆಗಳನ್ನು ಸ್ವೀಕರಿಸದಿದ್ದಲ್ಲಿ ಮೆಸೇಜ್ (ಎಸ್.ಎಂ.ಎಸ್) ಕಳುಹಿಸಿರುತ್ತೀರಿ. ನೀವು ಫೋನ್ ಮಾಡುವ ಚಾಳಿಯನ್ನು ಮುಂದುವರಿಸಿ, ದಿನಾಂಕ: 23-3-2009 ರಂದು ರಾತ್ರಿ 1.45 ಗಂಟೆಯಲ್ಲಿ ಅಂದರೆ ಅವೇಳೆಯಲ್ಲಿ ಸಹ ಫೋನ್ ಮಾಡಿರುತ್ತೀರೆಂದು ಅವರು ದೂರವಾಣಿ ಕರೆ ಸ್ವೀಕರಿಸದೇ ಇದ್ದ ಕಾರಣ ಕಛೇರಿಯಲ್ಲಿ ಅವರ ವಿರುದ್ಧ ಚಾರಿತ್ರ್ಯಕ್ಕೆ ಮಸಿ ಬಳಿಯುವಂತಹ ಇಲ್ಲ ಸಲ್ಲದ ಆರೋಪಗಳನ್ನು ಮಾಡುವ ಮೂಲಕ ಮಾನಸಿಕವಾಗಿ ಹಿಂಸೆ ನೀಡಿರುತ್ತೀರಿ. ಈ ಪ್ರಕಾರ ವಿವಾಹಿತ ಮಹಿಳಾ ಉದ್ಯೋಗಿಗೆ ಮಾನಸಿಕ ದೌರ್ಜನ್ಯವೆಸಗುವುದರ ಮೂಲಕ ದುರ್ನಡತೆ ಪ್ರದರ್ಶಿಸಿರುತ್ತಾರೆ.
2. ಶ್ರೀಮತಿ ಸುನೀತ, ಬೆರಳಚ್ಚುಗಾರರು, ಅಪರಾಧ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿಯವರಿಗೆ ನೀವು ಪದೇ ಪದೇ ದೂರವಾಣಿ ಸಂಖ್ಯೆ 0821-2450006 ಮತ್ತು 9844717658 ಗಳಿಂದ ಫೋನ್ ಮಾಡಿ ಇಲ್ಲಸಲ್ಲದ ವಿಷಯಗಳನ್ನೆಲ್ಲಾ ಮಾತನಾಡುತ್ತಿದ್ದು, ರಾತ್ರಿ 11-00 ಗಂಟೆ ವೇಳೆಯಲ್ಲಿ ಕರೆ ಮಾಡಿ ಅವಾಚ್ಯ ಶಬ್ದಗಳನ್ನು ಉಪಯೋಗಿಸಿ ಮಾತನಾಡಿರುತ್ತಾರೆ.
3. ಕಛೇರಿಯ ಕ್ಯಾಂಟೀನ್‌ನಲ್ಲಿ ಕುಳಿತು ಶ್ರೀಮತಿ ಸುನೀತ, ಬೆರಳಚ್ಚುಗಾರರನ್ನುದ್ದೇಶಿಸಿ "ಆ ಮುದುಕಿ ಇದ್ದಾಳಲ್ಲ ಅವಳ ಕೈಯಲ್ಲಿ ಕೆಲಸ ಮಾಡಿಸುತ್ತೇನೆ" ಎಂದು ಅವಾಚ್ಯವಾಗಿ ಮಾತನಾಡಿರುತ್ತೀರಿ. ಅವರಿಗೆ ಊಟದ ವಿರಾಮದ ವೇಳೆಯಲ್ಲಿ ದೂರವಾಣಿ ಕರೆ ಮಾಡುವುದು, ಅವರು ಕರೆ ಸ್ವೀಕರಿಸದೆ ಇದ್ದಲ್ಲಿ ಕಛೇರಿಗೆ ಆಗಮಿಸಿದ ಕೂಡಲೇ ನಿಮ್ಮ ಟೇಬಲ್‌ನಲ್ಲಿ ದುಡ್ಡು ಇಟ್ಟಿದ್ದೆ ಅದಕ್ಕಾಗಿ ನಿಮಗೆ ದೂರವಾಣಿ ಕರೆ ಮಾಡಿದ್ದೆ ಅಂತ ಹೇಳೋದು, ಪದೇ ಪದೇ ಮಿಸ್ ಕಾಲ್ ಕೊಡುವುದನ್ನು ಮಾಡಿರುತ್ತೀರಿ. ಶ್ರೀಮತಿ ಸುನೀತ ರವರ ಮನೆಗೆ ಯಾರಾದ್ರೂ ಹೋಗಬಹುದು, ಕಛೇರಿಯ ಮತ್ತೊಬ್ಬ ಸಹೋದ್ಯೋಗಿ ಶ್ರೀ ಜಯರಾಮಚಂದ್ರರವರು ಒಂದು ಸಲ ಅವರ ಮನೆಗೆ ಹೋಗಿ ಬಂದ್ರೆ ಅವರಿಬ್ರೂ ಸರಿ ಹೋಗುತ್ತೆ ಎಂದು ಇತರೆ ಸಹೋದ್ಯೋಗಿಗಳ ಹತ್ತಿರ ಹೇಳಿ ಅವರ ಚಾರಿತ್ರ್ಯ ವಧೆಗೆ ಯತ್ನಿಸಿರುತ್ತಾರೆ.
4. ಶ್ರೀಮತಿ ಸುನೀತ, ಬೆರಳಚ್ಚುಗಾರರಿಗೆ ನೀವು ದೂರವಾಣಿ ಕರೆ ಮಾಡಿದಾಗ ಸ್ವೀಕರಿಸದೇ ಇದ್ದಲ್ಲಿ ಬೆಳಿಗ್ಗೆ ಅವರು ಕಛೇರಿಗೆ ಬಂದಾಗ ಎಲ್ಲರಿಗೂ ಕೇಳುವ ರೀತಿಯಲ್ಲಿ "ನಿಮ್ಮನ್ನು ಹುಡುಕಿಕೊಂಡು ಸಂಜೆ 6-30 ಗಂಟೆಯಲ್ಲಿ ಯಾರೋ ಗಂಡಸರು ಬಂದಿದ್ರು" ಎಂದು ಹೇಳಿ ಅವಮಾನ ಮಾಡಿರುತ್ತೀರಿ. ಅವರ ವಸ್ತ್ರವಿನ್ಯಾಸದ ಬಗ್ಗೆ ಮಾಡನಾಡುವುದು ಹಾಗೂ "ನಿಮಗೆ ಹಣ ಬೇಕಾದ್ರೆ ನನ್ನ ಕೇಳಿ, ಕೊಡುತ್ತೇನೆ" ಎಂಬಿತ್ಯಾದಿ ರೀತಿಯಲ್ಲಿ ಮಾತನಾಡಿ ಅವಮಾನ ಮಾಡುತ್ತಿದ್ದು, ಈ ಬಗ್ಗೆ ಶ್ರೀಮತಿ ಸುನೀತ, ಬೆರಳಚ್ಚುಗಾರರು ಮಾನ್ಯ ಪೊಲೀಸ್ ಆಯುಕ್ತರಿಗೆ ವರದಿ ನೀಡುತ್ತೇನೆಂದು ತಿಳಿಸಿದಾಗ. "ನಮ್ಮ ಮೇಲೆ ವರದಿ ಸಲ್ಲಿಸಿ ನೀನು ಈ ಕಛೇರಿಯಲ್ಲಿ ಹೇಗೆ ಕೆಲಸ ಮಾಡುತ್ತೀಯ ನೋಡುತ್ತೇನೆ" ಎಂದು ಹೆದರಿಸಿರುತ್ತೀರಿ. ಇವರು ಓರ್ವ ವಿಧವಾ ಮಹಿಳಾ ಉದ್ಯೋಗಿಯಾಗಿದ್ದು, ಇವರೊಂದಿಗೆ ಅನುಚಿತವಾಗಿ ವರ್ತಿಸುವ ಮೂಲಕ ಮಾನಸಿಕ ದೌರ್ಜನ್ಯವೆಸಗಿರುತ್ತಾರೆ.

ಒಬ್ಬ ಸರ್ಕಾರಿ ನೌಕರರಾಗಿ ಮಹಿಳಾ ಸಹೋದ್ಯೋಗಿಗಳೊಡನೆ ಅನುಚಿತವಾಗಿ ವರ್ತಿಸಿ, ಅವೇಳೆಯಲ್ಲಿ ದೂರವಾಣಿ ಕರೆಗಳನ್ನು ಮಾಡಿ ಮಾನಸಿಕವಾಗಿ ನೋವುಂಟು ಮಾಡಿರುತ್ತೀರಿ ಹಾಗೂ ಅವರುಗಳ ವಿರುದ್ಧ ಇಲ್ಲ ಸಲ್ಲದ ಆರೋಪಗಳನ್ನು ಮಾಡಿ ಅವರ ಚಾರಿತ್ರ್ಯ ವಧೆಗೆ ಮಸಿ ಬಳಿಯಲು ಯತ್ನಿಸಲು ಪ್ರಯತ್ನಿಸಿ, ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ವರ್ತಿಸುವುದರ ಮೂಲಕ ಕ.ನಾ.ಸೇ (ನಡತೆ) ನಿಯಮ 1966ರ ನಿಯಮ

29 (ಬಿ) ಯನ್ನು ಉಲ್ಲಂಘಿಸುವುದರ ಮೂಲಕ ಕರ್ತವ್ಯದಲ್ಲಿ ತೀವ್ರ ಸ್ವರೂಪದ ದುರ್ನಡತೆ ಪ್ರದರ್ಶಿಸಿರುತ್ತಾರೆಂದು ಈ ದೋಷಾರೋಪಣ ಪತ್ರವನ್ನು ಸದರಿಯವರಿಗೆ ನೀಡಿರುತ್ತಾರೆ.

ಪರಿಷ್ಕರಣ ಮೇಲ್ಮನವಿದಾರರು ದೋಷಾರೋಪಣಾ ಪತ್ರವನ್ನು ಸ್ವೀಕರಿಸಿ ತಮ್ಮ ವಿವರಣೆಯನ್ನು ಸಲ್ಲಿಸಿರುತ್ತಾರೆ. ಸದರಿಯವರು ಸಲ್ಲಿಸಿದ ಸಮಜಾಯಿಷಿಯಲ್ಲಿ ಮಂಡಿಸಿದ ವಿವಾದಾಂಶಗಳಿಗೆ ಕೂಲಂಕಷವಾಗಿ ಚರ್ಚಿಸಿ ಸಮಜಾಯಿಷಿಯು ಸಮಂಜಸವಾಗಿಲ್ಲವಾದ ಕಾರಣ ಶಿಸ್ತು ಪ್ರಾಧಿಕಾರ ದಿನಾಂಕ: 12–5–2009 ರಲ್ಲಿ ತಿರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ. "ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 8(iii) ರ ಪ್ರಕಾರ "ಪರಿಷ್ಕರಣ ಮೇಲ್ಮನವಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಬಾಧಕವಾಗದಂತೆ ಎರಡು ವರ್ಷಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ ಎಂದು ಆದೇಶಿಸಿರುತ್ತಾರೆ."

ಈ ಆದೇಶದ ವಿರುದ್ಧ ಮೇಲ್ಮನವಿ ಪ್ರಾಧಿಕಾರವಾದ ಡಿಜಿ ಮತ್ತು ಐಜಿಪಿ ರವರಿಗೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಂಬಂಧಿಸಿದ ಕಂಡಿಕಾವಾರು ಷರಾ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಮೇಲ್ಮನವಿದಾರರು ಮಹಿಳಾ ಸಹೋದ್ಯೋಗಿಗಳಾದ ಶ್ರೀಮತಿ ಎಂ.ಎನ್. ಶಾರದ, ದ್ವಿ.ದ.ಸ. ಮತ್ತು ಶ್ರೀಮತಿ ಸುನಿತ, ಟೈಪಿಸ್ಟ್, ಪೊಲೀಸ್ ಕಮೀಷನರ್ ರವರ ಕಛೇರಿ ಮೈಸೂರು ನಗರ ರವರುಗಳೊಂದಿಗೆ ಅನುಚಿತವಾಗಿ ವರ್ತಿಸಿರುವುದು ಸದರಿಯವರುಗಳು ನೀಡಿರುವ ದೂರಿನ ಮೇರೆಗೆ ದೃಢಪಡುತ್ತದೆ. ಶಿಸ್ತು ಪ್ರಾಧಿಕಾರವು ಸದರಿಯವರಿಗೆ ವಿಧಿಸಿರುವ ಶಿಕ್ಷೆಯು ಸಮಂಜಸವಾಗಿರುತ್ತದೆ ಮತ್ತು ಶಿಸ್ತು ಪ್ರಾಧಿಕಾರಿಗಳ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇರುವುದಿಲ್ಲವಾದ್ದರಿಂದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

"ಶ್ರೀ ಜೆ. ಪ್ರಕಾಶ್ ಕಮಲ್ ಕುಮಾರ್, ಪ್ರ.ದ.ಸ. ಪೊಲೀಸ್ ಕಮೀಷನರ್ ರವರ ಕಛೇರಿ, ಒಒಡಿ ಎಸಿಪಿ, ಕೃಷ್ಣರಾಜ ವಿಭಾಗ ರವರ ಕಛೇರಿ, ಮೈಸೂರು ನಗರ ಹಾಲಿ ನ್ಯಾಯ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರು ರವರ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ"

ತದನಂತರ ಈ ಎರಡು ಆದೇಶಗಳ ವಿರುದ್ಧ ಪರಿಷ್ಕರಣ ಮೇಲ್ಮನವಿಯನ್ನು ಮೇಲೆ ಓದಲಾದ (6)ರಲ್ಲಿ ಸರ್ಕಾರಕ್ಕೆ ದಿನಾಂಕ: 03–04–2010 ರಂದು ಸಲ್ಲಿಸಲಾಗಿದೆ.

ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಸದರಿಯವರು ಮಹಿಳಾ ಸಹೋದ್ಯೋಗಿಗಳೊಡನೆ ಅನುಚಿತ ವರ್ತನೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 39 ಪೊಸಿಲಿ 2008 ಬೆಂಗಳೂರು, ದಿನಾಂಕ: 31–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜೆ. ಪ್ರಕಾಶ್ ಕಮಲ್ ಕುಮಾರ್ ಪ್ರ.ದ.ಸ. ಪೊಲೀಸ್ ಕಮೀಷನರ್ ರವರ ಕಛೇರಿ, ಒಒಡಿ ಎಸಿಪಿ. ಕೃಷ್ಣರಾಜ ವಿಭಾಗ ರವರ ಕಛೇರಿ, ಮೈಸೂರು ನಗರ, ಹಾಲಿ ನ್ಯಾಯ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ)ರ ಪ್ರಕಾರ ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 1458

## ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 3 ಇಎನ್‌ಜಿ 2011 ದಿನಾಂಕ: 07–05–2011.
2. ಪತ್ರಿಕಾ ಪ್ರಕಟಣೆ ದಿನಾಂಕ: 25–03–2011.
3. ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ದಿನಾಂಕ: 12–05–2011ರ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವ ಸಲುವಾಗಿ 2010–11ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ನೀಡಲು ಸರ್ಕಾರವು ಉದ್ದೇಶಿಸಲಾಗಿರುತ್ತದೆ. ಈ ಪ್ರಶಸ್ತಿ ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟುಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಆರಂಭಶೀಲತೆ/ಕೊಡುಗೆ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ರೀತಿ ವಿಶಿಷ್ಟ ಸೇವೆ ಸಲ್ಲಿಸಿರುವವರಿಂದ ಮತ್ತು ಅದರ ಬಗ್ಗೆ ಅರವಿರುವವರಿಂದ ಅರ್ಜಿ/ನಾಮನಿರ್ದೇಶನ ಕೋರಿ ದಿನಾಂಕ : 25–03–2011 ರಂದು ಪತ್ರಿಕಾ ಪ್ರಕಟಣೆ ಹೊರಡಿಸಲಾಗಿತ್ತು. ಈ ಪ್ರಕಟಣೆಗೆ ಪ್ರತಿಕ್ರಿಯಿಸಿ ಸಲ್ಲಿಸಲಾಗಿದ್ದ ಅರ್ಜಿ/ನಾಮ ನಿರ್ದೇಶನಗಳನ್ನು ಪರಿಶೀಲಿಸಿ ಅರ್ಹ ವ್ಯಕ್ತಿ/ಸಂಸ್ಥೆಗಳನ್ನು ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಮೇಲೆ (1) ರಲ್ಲಿ ಓದಲಾದ ಸಕಾರದ ಆದೇಶದ ಮೂಲಕ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಸಮಿತಿಯು ದಿನಾಂಕ: 12–05–2011 ರಂದು ಸಭೆ ನಡೆಸಿ, 2010–11ನೇ ಸಾಲಿನ ರಾಜ್ಯ ಪರಿಸರ ಪ್ರಶಸ್ತಿಗೆ ತನ್ನ ಶಿಫಾರಸ್ಸನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ.

ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸಿ, 2010–11ನೇ ಸಾಲಿನ ರಾಜ್ಯ ಪರಿಸರ ಪ್ರಶಸ್ತಿ ಪುರಸ್ಕೃತ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಅಂತಿಮಗೊಳಿಸಲಾಗಿದೆ. ಅದರಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 3 ಇಎನ್‌ಜಿ 2011, ಬೆಂಗಳೂರು, ದಿನಾಂಕ : 27–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸಿನಂತೆ, ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಕೆಳಕಂಡ ವ್ಯಕ್ತಿ ಮತ್ತು ಸಂಸ್ಥೆಗಳನ್ನು 2010–11ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ಆಯ್ಕೆ ಮಾಡಲಾಗಿದೆ. ಸದರಿ ಪ್ರಶಸ್ತಿಯು ತಲಾ ರೂ. 1.00 ಲಕ್ಷ (ಒಂದು ಲಕ್ಷ ರೂ. ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ.

1. ಶ್ರೀ ಗಂಗಾಧರೇಂದ್ರ ಸರಸ್ವತಿ ಸ್ವಾಮಿಗಳು.
   ಸೊಂದಾ ಸ್ವರ್ಣವಳ್ಳಿ, ಮಹಾಸಂಸ್ಥಾನಂ,
   ಮಹದೇವ ಪೋಸ್ಟ್,
   ಸೊಂದಾ–581336
   ಶಿರ್ಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.
2. ಶ್ರೀ ನಂದಿದುರ್ಗ ಬಾಲುಗೌಡ
   ಕೃಷ್ಣ ಪಾರಿಜಾತ, ನಂ 678,
   ಹೆಚ್ ಎ ಎಲ್ 3ನೇ ಹಂತ
   ಬೆಂಗಳೂರು–560075
3. ಮೆ. ಪಿಲಿಕುಳ ನಿಸರ್ಗಧಾಮ ಸೊಸೈಟಿ (ರಿ)
   ವಿಜ್ಞಾನ ಕೇಂದ್ರ, ಮೂದುಶೆಡ್ಡೆ
   ವಾಮಂಜೂರು ಅಂಚೆ,
   ಮಂಗಳೂರು – 575 028.
4. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು
   ವಿಜ್ಞಾನ ಭವನ ನಂ 24/2, 21ನೇ ಮುಖ್ಯ ರಸ್ತೆ,
   ಬನಶಕರಿ 2ನೇ ಹಂತ,
   ಬೆಂಗಳೂರು–560070.
5. ಶ್ರೀ ಎಸ್.ಜಿ ದೇವರಾಜ ರೆಡ್ಡಿ
   ಅಂತರ್ಜಲ ಹಾಗೂ ಮಳೆ ಕೊಯ್ಲು ತಜ್ಞರು,
   ಜಲಧಾಮ, ಆಯ್ಯಪ್ಪ ಸ್ವಾಮಿ ದೇವಸ್ಥಾನದ ಹತ್ತಿರ,
   ಮೆದೇಹಳ್ಳಿ ರಸ್ತೆ, ಚಿತ್ರದುರ್ಗ–577501.
6. ಪರ್ಯಾವರ್ಣಿ (ರಿ)
   C/o ಎಸ್. ವಾಯ್ ಪ್ರಭು
   ಮೊಹಮ್ಮದ್ ಅಲಿ ರಸ್ತೆ,
   ಟಿಳಕವಾಡಿ, ಬೆಳಗಾವಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಮನೋಹರ್**
ಸರ್ಕಾರದ ಅಧೀನ ಕಾರ್ಯದರ್ಶಿ
(ಜೀವಿಶಾಸ್ತ್ರ ಮತ್ತು ಪರಿಸರ)
ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ

ಪಿ.ಆರ್. 1459

## FOREST, ECOLOGY, AND ENVIRONMENT SECRETARIAT

**Sub :** Diversion of 4.34 ha. of forest land in Taralu limits of Kaggalipura range in Bangalore Urban Forest Division and in Bannerghatta National Park limits for construction of 220 KV line Somanahalli to Malur in favour of KPTCL.

**Read :**
1. Letter No. A5 (5) GFL. KV. CR. 3/02-03, dated : 06-08-2003 of Principal Chief Conservator of Forests, Bangalore.
2. State Government letter No. FEE 276 FGL 2003, dated : 06-09-2003.
3. Letter No. F(C) A/11/2/269/KAR/TL/1468, dated 20th October 2003 of Government of India, Ministry of Environment and Forests, Regional Office, (South Zone), Bangalore.
4. State Government letter No. FEE 276 FGL 2003, dated : 14-11-2003.
5. Minutes of the meeting of Standing Committee of National Board for Wild Life held on 18-03-2004.
6. State Government letter No. FEE 276 FGL 2003, dated : 08-06-2004.
7. Letter No. F(C) A 11.2/269/KAR/TL2986, dated 16th September 2008 of the Government of India, Ministry of Environment and Forest, Regional Office, (South Zone) Bangalore.
8. Letter No. A5(5) gfl. Kv.cr. 3/02-03, dated 17-04-2009 of Principal Chief Conservator of Forests, Bangalore.
9. State Government letter No. FEE 72 FGL 2008, dated : 25-05-2009.
10. Letter No. F(C) A/11.2/269/ KAR/TL/8747, dated 15th March 2011 and Letter No. F(C)A/11.2/269/KAR/TL/ 8954, dated 20th April 2011 of Government of India, Ministry of Envirnoment and Forests, Regional Office, (South Zone), Bangalore.

**Preamble:**

The Principal Chief Consrvator of Forests, Bangalore vide his letter dated: 06-08-2003 read at (1) above had submitted a proposal for diversion of 4.34 ha. of forest land in two forest divisions of Bangalore Urban Forest Division (0.36 ha.) and Bannergatta National Park (3.98 ha.) for construction of 220 KV DC transmission line from Somanahalli to Malur in favour of Karnataka Power Transmissin Corporation Limited, Bangalore, subject to certain conditions.

Accordingly, the proposal was recommended to Government of India, vide State Government letter dated: 06-09-2003 read at (2) above. Government of India in its letter read at (3) above expressed its inability to approve the Project since the part of proposed area falls in Bannergatta National park. So that the letter written to Government of India read at (4) above for seeking the consent of National Board of Wildlife (NBWL).

National Board of Wild life(NBWL) recommended the proposal with certain conditions read at (5) above, the conditions of NBWL as follows:

i) There will be no change in the legal status of the Protected area.

ii) The user agency, i.e., KPTCL would pay an amount of Rs. 1.00 crore for conservation of wild life in the Bannergatta national Park. The amount would be deposited with the State Chief Wild Life Warden.

iii) The State Government would add natural habitat equivalent to 3.98 ha. to the Bannergatta National Park.

In letter dated : 08-06-2004 read at (6) above where in Government of Karnataka wrote a letter to Government of India along with the meeting proceedings of NBWL with the report of Expert Team to consider the proposal.

The Government of India, Ministry of Environment and Forests, Regional Office, South Zone, Bangalore vide their letters dated : 16-09-2008 read at (7) above conveyed its approval (Stage-I) for diversion of 4.34 ha. of forest land subject to fulfillment of certain conditions and the same was communicated to the Principal Chief Conservator of Forest, Bangalore for compliance.

The Principal Chief Conservator of Forest, Bangalore vide his letter dated 17-04-2009 furnished the compliance report read at (8) above and the same has been sent to Government of India vide State Government letter dated: 25-05-2009 read at (9) above.

Government of India Ministry of Environment and Forest Regional Office, South Zone, Bangalore vide their letters dated: 15-03-2011 and 20-4-2011 read at (10) above has conveyed its approval (Stage-II) under Section 2 of Forest (Conservation) Act, 1980 for diversion of 4.34 ha. of forest land i.e., 0.36 ha. in Bangalore Urban Forest Division and 3.98 ha. in Bannergatta National Park for construction of 220 KV DC transmission line from Somanhalli to Malur in favour Karnataka Power Transmission Corporation Limited, Bangalore, subject to certain conditions.

The proposal has been examined in detail and hence the order.

**Government Order No. : FEE 72 FGL 2008, Bangalore, dated 30-05-2011**

In the circumstances explained in the preamble above, Government is pleased to accord approval under section (2) of Forest (Conservation) Act 1980 for diversion of 4.34 ha. of forest land i.e., 0.36 ha. in Bangalore Urban Forest Division and 3.98 ha. in Bannergatta National Park for construction of 220 KV DC transmission line from Somanhalli to Malur in favour Karnataka Power Transmission Corporation Limited, Bangalore, subject to the following conditions.

1. The legal status of forest land shall remain unchanged.
2. Demarcation of the proposal forest area shall be carried out by erecting cement concrete pillars duly numbered at an interval of 20 mts. At cost of user agency.
3. The Compensatory afforestation shall be raised over 8.68 ha. of degraded forest land at the cost of user agency.
4. The additional amount of the Net Present value (NPV) of the diverted forestland if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to Ad-hoc CAMPA in account number CA-1582 of Corporation Bank, Block-II, CGO Complex, Phase-I Lodhi Road, New Delhi-110 003.
5. The total forest area utilization for the project shall not exceed 4.34 ha. In case the land is not taken over by the user agency or the same is not used for the stipulated purpose within a period of two year, then the area shall be taken back by the Forest Department.
6. The land shall be utilized only for the purpose for which it is released.
7. The lessee has to pay the lease rent as fixed by the Govrnment of Karnataka from time to time.
8. The lease is granted for 20 (Twenty) years.
9. The user agency has to pay the charges of compensatory afforestation at the rate prevailing at the time of approval (At present it is Rs. 1,05,000/- per ha.)
10. The user has to pay the extraction charges of trees as calculated by the concerned Deputy Conservator of Forest.
11. Since the area under diversion passes through the National park any damages to Wildlife shall be compensated by the user agency.
12. There will be no charge in the legal status of the Protected area.
13. The user agency, i.e., KPTCL would pay an amount of Rs. 1.00 crore for conservation of wild life in the Bannergatta National Park. The amount would be deposited with the State Chief Wild Life Warden.
14. The State Government would add natural habitat equivalent to 3.98 ha. to the Bannergattta National Park.
15. The Karnataka Forest Act, 1963 Karnataka Forest Rules 1969 and Wildlife (Protection) Act 1972 will be applicable for any violations.
16. The user agency shall pay the Net Present Value (NPV) as per the Hon'ble Supreme Court of India Orders dated: 28-03-2008 and 09-05-2008.
17. Any other conditions to be imposed by the Government of India/Government of Karnataka/Principal Chief Conservator of Forest will have to be abided by the lessee.

By Order and in the name of the Governor of Karnataka

**H.M. Mallikarjuna swamy,**

Under Secretary to Government,

P.R. 1460

Forest, Ecology and Envirnoment Department

## FOREST, ECOLOGY, AND ENVIRONMENT SECRETARIAT

**Sub :** Diversion of 0.42 ha. of forest land in Turahalli MF for laying of drinking water supply pipeline under Cauvery Water Supply Scheme, Stage-IV, Phase-II in favour of the Executive Engineer, K-4 Division, BWSSB, Bangalore.

**Read :** 1. Letter No. A5 (4) GFL. CR. 8/10-11, dated : 17-05-2011 of Principal Chief Conservator of Forest, Bangalore.

2. Government of India letter No. F. No. 11-9/98-FC, dated: 03-01-2005, 26-12-2007 and 11-09-2009.

**Preamble:**

The Principal Chief Consrvator of Forests, Bangalore vide his letter dated: 17-05-2011 read at (1) above had submitted a proposal for diversion of 0.42 ha. of forest land in Turahalli Foests for laying of drinking water supply pipeline under Cauvery Water Supply Scheme, Stage-IV, Phase-II in favour of the Executive Engineer, K-4 Division, BWSSB, Bangalore under the Forest (Conservation) Act 1980, subject to certain conditions.

This proposal has been examined as per the general approval of Government of India in its letter dated: 03-01-2005, 26-12-2007 and 11-09-2009 it has been decided to accord sanction for diversion of 0.42 ha. of forest land under the Forest (Conservation) Act 1980. The proposal has been examined in detail and hence the order.

**Government Order No. : FEE 86 FLL 2011 Bangalore, dated 31-05-2011**

In the circumstances explained in the preamble above, and in accordance with the general approval given by Government of India in their letters dated: 03-01-2005, 26-12-2007 and 11-09-2009, Government is pleased to accord approval under Forest (Conservation) Act 1980 for diversion of 0.42 ha. of forest land in Turahalli Foests for laying of drinking water supply pipeline under Cauvery Water Supply Scheme, Stage-IV, Phase-II in favour of the Executive Engineer, K-4 Division, BWSSB, Bangalore subject to the following conditions.

1. The legal status of forest land shall remain unchanged and it shall continue as forest land.
2. The lease tenure is for a period of 30 (Thirty) years.
3. The leasee shall pay lease rent as fixed by the Government from time to time.
4. The leased out area should be used for the purpose for which it is granted. In case the land is not used for the stipulated purpose within one year or when it no longer needed for the stipulated purpose, the area should be resumed to the Forest Department under section 82 of Karnataka Forest Act, 1963. The concerned Deputy Conservator of Forests is authorized to take necessary action in this regard.
5. No residential building shall be permitted in the proposed area.
6. The user agency may be insisted to pay the Compensatory Afforestation charges towards planting saplings 10 times of the trees proposed for felling i.e., 134 tress x 10 times = 1340 saplings.
7. The opened trench shall be refilled properly after laying the pipeline and there shall not be any scope for soil erosion.
8. The User Agency should not take up the blasing of underlying rock, strata, as it would greatly disturb the environment.
9. The boundary of the forest along the pipeline should be fenced with chainliks mesh at the cost of the User Agency as per the estimates prepared by the Deputy Conservator of Forest.
10. The user Agency has to pay the extraction charges of trees besides the expenditure for soil and moisture conservation work as assessed by the the Deputy Conservator of Forest.
11. The Karnataka Forest Act 1963 and Rules 1969 and other relevant Acts and Rules will be applicable for any violations.
12. The user Agency shall not sub-lease, mortgage and hypothecate the forest area.
13. The user Agency has to pay the Net Present Value (NPV) of forest land diverted under this proposal as per Orders dated 28-03-2008 and 9-05-2008 of the Hon'ble Supreme Court of India.
14. The User Agency shall ensure that no damage is caused to the surrounding flora and fauna.
15. The User Agency shall abide by all the conditions imposed upon by the Government of India, the Government of Karnataka and the Principal Chief Conservator of Forest (HoFF).

By Order and in the name of the Governor of Karnataka

**H.M. Mallikarjuna swamy,**

Under Secretary to Government,

Forest, Ecology and Envirnoment Department

P.R. 1461

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಉಳ್ಳಾಗಡ್ಡಿವಾಡಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಇ–1/2011–12/2570, ದಿ: 16–05–11.

1. ಸರ್ಕಾರದ ಆದೇಶ ಸಂಖ್ಯೆ ಸನೀಇ 10 ನಯೋಕಾ 2010, ದಿನಾಂಕ: 27–11–2010.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಉಳ್ಳಾಗಡಿವಾಡಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಸುಧಾರಣೆ ಕಾಮಗಾರಿಯ ಅಂದಾಜಿನ ಉಲ್ಲೇಖ(2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುವ ರೂ. 9458.76 ಲಕ್ಷ ಅಂದಾಜುಮೊತ್ತದ 169 ಕಾಮಗಾರಿಗಳ ಪೈಯಕಿ ಒಂದಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಸಣ್ಣ ನೀರಾವರಿ ವಿಭಾಗ ಬೆಳಗಾವಿಯಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 28–03–2011 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 31–03–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಇವರಲ್ಲಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಅವರ ಟೆಂಡರ್ ತೆರೆದು ಪರಿಶಿಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 41,25,333/– |
| ಪಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 56,17,597/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೋದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕೆಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
| ಮನೋಜಕುಮಾರ ಎಂ. ನಾಗರಕಟ್ಟೆ ಒಂದನೇ ದರ್ಜೆ ಗುತ್ತಿಗೆದಾರರು | ರೂ. 63,36,060/– | 53.59 ಹೆಚ್ಚು | 12.79 ಹೆಚ್ಚು |

ಮೇಲ್ಕಂಡ ಮನೋಜಕುಮಾರ ಎಂ. ನಾಗರಕಟ್ಟೆ, ಒಂದನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೆ. 12.79 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 21–05–2011 ರಂದು ಪತ್ರವನ್ನು ನೀಡಿ ತಾವು ನಮೂದಿಸಿರುವ ದರಗಳಲ್ಲಿಯೇ ಟೆಂಡರನ್ನು ಅನುಮೋದಿಸಲು ಕೋರಿರುತ್ತಾರೆ. ಈ ಟೆಂಡರನ್ನು ಸರ್ಕಾರದ ಪರಿಶೀಲಿಸಿ, ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 56,17,597/– ಗಳ ಮೇಲೆ ಶೇ. 7.5% ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 60,38,917/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 20 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 31–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಉಳ್ಳಾಗಡ್ಡಿವಾಡಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 56,17,597/– ಗಳ ಮೇಲೆ ಶೇ. 7.5% ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 60,38,917/– ಗಳಿಗೆ (ಅರವತ್ತು ಲಕ್ಷ ಮೂವತ್ತೆಂಟು ಸಾವಿರದ ಒಂಭೈನೂರ ಹದಿನೇಳು ರೂಪಾಯಿಗಳು ಮಾತ್ರ) ಶ್ರೀ ಮನೋಜಕುಮಾರ ಎಂ. ನಾಗರಕಟ್ಟೆ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1462 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಗಡಿ ಕುಶನೂರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಇ–6/2011–12/2603, ದಿ: 17–05–11.

2. ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(4), ದಿನಾಂಕ: 06–07–2010.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಗಡಿ ಕುಶನೂರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 200.00 ಲಕ್ಷದ ಅಂದಾಜಿಗೆ ಉಲ್ಲೇಖ(2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಸಣ್ಣ ನೀರಾವರಿ ವಿಭಾಗ ಬೀದರ್‌ಯಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 03–11–2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 13–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು, ಇವರಲ್ಲಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಅವರ ಟೆಂಡರ್ ತೆರೆದು ಪರಿಶಿಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,87,58,503/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 2,57,57,015/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೋದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕೆಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
| ಗುರುನಾಥ ಕೊಳ್ಳೂರ<br>ಒಂದನೇ ದರ್ಜೆ ಗುತ್ತಿಗೆದಾರರು | ರೂ. 2,68,79,448/– | 43.292 ಹೆಚ್ಚು | 4.357 ಹೆಚ್ಚು |

ಮೇಲ್ಕಂಡ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೋದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 4.357 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅನುಮೋದಿಸಲು ಮುಖ್ಯ ಇಂಜಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕತ ಮೊತ್ತ ರೂ. 2,57,57,015/– ಗಳ ಮೇಲೆ ಶೇ. 4.357ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,68,79,448/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 42 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 31–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಗಡಿ ಕುಶನೂರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2,57,57,015/– ಗಳ ಮೇಲೆ ಶೇ. 4.357% ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,68,79,448/– ಗಳಿಗೆ (ಎರಡು ಕೋಟಿ ಅರವತ್ತೆಂಟು ಲಕ್ಷ ಎಪ್ಪತ್ತೊಂಭತ್ತು ಸಾವಿರದ ನಾಲ್ಕುನೂರ ನಲವತ್ತೆಂಟು ರೂಪಾಯಿಗಳು ಮಾತ್ರ) ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1463

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಡಿಗ್ಗಿ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಇ–6/2011–12/2637, ದಿ: 18–05–11.

2. ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(4), ದಿನಾಂಕ: 06–07–2010.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಡಿಗ್ಗಿ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 180.00 ಲಕ್ಷದ ಅಂದಾಜಿಗೆ ಉಲ್ಲೇಖ(2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಸಣ್ಣ ನೀರಾವರಿ ವಿಭಾಗ ಬೀದರ್‌ನಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 03–11–2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 13–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬ ಗುತ್ತಿಗೆದಾರರು ಭಾಗವಹಿಸಿದ್ದು, ಅವರು ಅರ್ಹತೆ ಹೊಂದಿರುತ್ತಾರೆ, ಅವರ ಟೆಂಡರ್ ತೆರೆದು ಪರಿಶಿಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,76,07,287/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 2,41,78,419/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೋದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ ಕಡಿಮೆ |
| ಗುರುನಾಥ ಕೊಳ್ಳೂರ<br>ಒಂದನೇ ದರ್ಜೆ ಗುತ್ತಿಗೆದಾರರು | ರೂ. 2,52,55,200/– | 43.44 ಹೆಚ್ಚು | 4.453 ಹೆಚ್ಚು |

ಮೇಲ್ಕಂಡ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೆ. 4.453 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,41,78,419/– ಗಳ ಮೇಲೆ ಶೇ. 4.453ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,52,55,200/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 41 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 31–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಡಿಗ್ಗಿ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,41,78,419/– ಗಳ ಮೇಲೆ ಶೇ. 4.453% ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,52,55,200/– ಗಳಿಗೆ (ಎರಡು ಕೋಟಿ ಐವತ್ತೆರಡು ಲಕ್ಷ ಐವತ್ತೈದು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ) ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1464

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ವೈ. ಕುಂಬಾರ, ವಿಚಾರಣಾಧಿಕಾರಿಗಳು, ಹಾಗೂ ಜಿಲ್ಲಾ ಸೆಷನ್ಸ್ (ನಿವೃತ್ತ), ಇವರಿಗೆ ವಿಚಾರಣಾ ವರದಿ ಸಲ್ಲಿಸಿರುವುದಕ್ಕಾಗಿ ಗೌರವ ಧನ ಮತ್ತು ವಾಹನ ಭತ್ಯೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 24 ಇಮುವಿ 2008, ದಿನಾಂಕ: 17–07–2010.

2 ಶ್ರೀ ಎಸ್. ವೈ. ಕುಂಬಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾದೀಶರು ಹಾಗೂ ವಿಚಾರಣಾಧಿಕಾರಿ, ಇವರ ವಿಚಾರಣ ವರದಿ ಮತ್ತು ಪತ್ರ ದಿನಾಂಕ: 14–02–2011.

**ಪ್ರಸ್ತಾವನೆ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಅವರು, ದಿನಾಂಕ: 24–06–2009 ರಂದು ಸಿ.ಆಸು.ಇಲಾಖೆಗೆ ಕಳುಹಿಸಿದ ಪ್ರಸ್ತಾವನೆಯಲ್ಲಿ ಕರ್ನಾಟಕ ನೀರಾವರಿ ನಿಗಮ ನಿಯಮಿತ, ನೀರಾವರಿ (ಉತ್ತರ ವಲಯ) ಬೆಳಗಾವಿ, ಇಲ್ಲಿ ಶ್ರೀ ಎಸ್.ಎಸ್. ಖಣಗಾವಿ, ಮುಖ್ಯ ಇಂಜಿನಿಯರ್ ಇವರು ದಿನಾಂಕ: 08–05–2006 ರಿಂದ 05–07–2007 ರವರೆಗೆ ಅಧೀಕ್ಷಕ ಇಂಜಿನಿಯರ್ ಆಗಿ ಮತ್ತು ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್, ಇವರು ದಿನಾಂಕ 17–05–2007 ರಿಂದ 31–08–2007ರವರೆಗೆ ಮುಖ್ಯ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಬಳ್ಳಾರಿ ನಾಲಾ ಅಣೆಕಟ್ಟು ಹಾಗೂ ಕಾರ್ಯ ಯೋಜನೆ ಕಾಮಗಾರಿಗಳನ್ನು ನಿರ್ವಹಿಸುವಾಗ ಕಾಮಗಾರಿಗಳ ಪರಿಮಾಣಗಳ ನಿಖರತೆ ಹಾಗೂ ತೃಪ್ತಿಕರ ಗುಣಮಟ್ಟದ ಬಗ್ಗೆ ಮನದಟ್ಟು ಮಾಡಿಕೊಳ್ಳದೇ ಕೇವಲ ಆಕ್ಷೇಪಣೆಗಳನ್ನು ದಾಖಲಿಸಿದ ಅಣೇಕಟ್ಟು ಹಾಗೂ ನಾಲಾ ನಿರ್ಮಾಣ ಕಾರ್ಯದ ಲೈನ್ ಅಂದಾಜು ಪ್ರಕ್ರಿಯೆ ಮಂಜೂರಾತಿಯಂತೆ ಕಾಂಪೋನೆಂಟ್ ವೈಸ್ ವಿನ್ಯಾಸ ನಕ್ಷೆ ಮತ್ತು ಅಂದಾಜುಗಳನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯದ ಕಾಮಗಾರಿಗಳನ್ನು 2 ವರ್ಷಗಳೊಳಗೆ ಮುಗಿಸಲು ಹಾಕಿಕೊಂಡ ಕಾರ್ಯಕ್ರಮ ಪಟ್ಟಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದ ಹಾಗೂ ಗುತ್ತಿಗೆದಾರರೊಂದಿಗೆ ಯಾವುದೇ ಪತ್ರ ವ್ಯವಹಾರ ಮಾಡದ ಪ್ರಾರಂಭವಾದ 3 ವರ್ಷಗಳ ನಂತರವೂ ಕಾಮಗಾರಿಯ ಅಂದಾಜು ಪೂರ್ಣಗೊಳ್ಳದ ಬಗ್ಗೆ ಪ್ರಗತಿ ಪರಿಶೀಲನಾ ಸಭೆಯಲ್ಲಾಗಲೀ ಎಂ.ಎಂ.ಆರ್. ಸಭೆಯಲ್ಲಾಗಲೀ ಪರಿಶೀಲಿಸದೇ ಉಳಿದ ಕಾಮಗಾರಿಯ ಸ್ಥಳಕ್ಕೆ ತಿಂಗಳಿಗೆ ಒಮ್ಮೆಯಾದರೂ ಭೇಟಿ ನೀಡದೇ ರೂ. 21.83 ಕೋಟಿಗಳಷ್ಟು ಮೊತ್ತವನ್ನು ಸರ್ಕಾರಕ್ಕೆ ನಷ್ಟ ಉಂಟು ಮಾಡಿದ ಆರೋಪಗಳ ಸತ್ಯಾಸತ್ಯತೆಗಳನ್ನು ಪರಿಶೀಲಿಸಲು ಆರೋಪಿತ ಅಧಿಕಾರಿಗಳಿಗೆ ನೋಟೀಸ್ ಜಾರಿ ಮಾಡುವ ಮೂಲಕ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ (1)ರ ಉಲ್ಲೇಖದಲ್ಲಿ ಶ್ರೀ ಎಸ್.ವೈ. ಕುಂಬಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ದಿನಾಂಕ: 17–07–2010ರಂದು ನೇಮಿಸಲಾಗಿದೆ. ಅದರಂತೆ ಮೇಲೆ ಓದಲಾದ (2) ರಲ್ಲಿ ದಿನಾಂಕ: 14–02–2011 ರಲ್ಲಿ ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಅದ್ದರಿಂದ ಸದರಿ ವಿಚಾರಣಾಧಿಕಾರಿಯವರಿಗೆ ನಿಯಮಗಳ ಪ್ರಕಾರ ಗೌರವ ಧನ ಮತ್ತು ವಾಹನ ಭತ್ಯೆಯನ್ನು ಮಂಜೂರು ಮಾಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 24 ಇಮುವಿ 2008 ಬೆಂಗಳೂರು, ದಿನಾಂಕ: 28–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ವೈ. ಕುಂಬಾರ, ನಿವೃತ್ತ ಜಿಲ್ಲಾನ್ಯಾಯಾಧೀಶರು, ವಿಚಾರಣಾ ವರದಿ ಸಲ್ಲಿಸಿರುವ ಕಾರಣ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007, ದಿನಾಂಕ: 11–04–2008 ರನ್ವಯ ರೂ. 8000/–ಗಳ (ಎಂಟು ಸಾವಿರ ಮಾತ್ರ) ಗೌರವಧನ ಹಾಗೂ ರೂ. 1500/– ಗಳ (ಒಂದು ಸಾವಿರದ ಐದು ನೂರು ಮಾತ್ರ) ವಾಹನ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಆಯವ್ಯಯದ ಲೆಕ್ಕಶೀರ್ಷಿಕೆ " 2052/ಸಚಿವಾಲಯ, ಸಾಮಾನ್ಯ ಸೇವೆಗಳು–090, ಸಚಿವಾಲಯ–01, ಕರ್ನಾಟಕ ಸರ್ಕಾರದ ಸಚಿವಾಲಯ–051, ಸಾಮಾನ್ಯ ವೆಚ್ಚಗಳು" ಇದರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1465 (ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ)

(ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ನಿರ್ವಹಿಸುತ್ತಿರುವ "ರೇಷ್ಮೆ ಕೃಷಿ' ವಿಷಯವನ್ನು ತೋಟಗಾರಿಕೆ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ಸಂ.:ಮುಕಾ/4021/ಕಂಪ್ಯೂಟರ್/2011, ದಿನಾಂಕ 4–5–2011.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು 1977ರ ಅನುಸೂಚಿ–IV ರನ್ವಯ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿ ಭಾರಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು, ಸಣ್ಣ ಪ್ರಮಾಣದ ಕೈಗಾರಿಕೆಗಳು, ಜವಳಿ ಗಣಿ ಮತ್ತು ಭೂವಿಜ್ಞಾನ, ಕಬ್ಬಿಣ ಉಕ್ಕು ಮತ್ತಿತರ ವಸ್ತುಗಳಿಗೆ ಸಂಬಂಧಪಟ್ಟ ನಾಗರಿಕ ಸರಬರಾಜು, ನಾಗರಿಕ ವಿಮಾನಯಾನ ಮತ್ತು ರೇಷ್ಮೆ ಕೃಷಿ ವಿಷಯಗಳಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಿಸಲಾಗುತ್ತಿದೆ. ರೇಷ್ಮೆ ಕ್ಷೇತ್ರದ ನಿರೂಪಣೆ ಹಾಗೂ ಅಭಿವೃದ್ಧಿಯತ್ತ ಹೆಚ್ಚಿನ ಗಮನ ಹರಿಸುವ ಅವಶ್ಯಕತೆ ಇರುವುದರಿಂದ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಗಣಿ ನಿಬಂಧನೆ ಹಾಗೂ ಗಣಿ ಸಂಬಂಧಿತ ಹೆಚ್ಚಿನ ಕಾರ್ಯಭಾರದ ಒತ್ತಡ ಇರುವುದರಿಂದ ರೇಷ್ಮೆ ಕೃಷಿಗೆ ಸಂಬಂಧಪಟ್ಟ ವಿಷಯವನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಬೇರ್ಪಡಿಸುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಇದಲ್ಲದೆ ರೇಷ್ಮೆ ಕೈಗಾರಿಕೆಯ ಚಟುವಟಿಕೆಗಳು ಸೇರಿದಂತೆ ರೇಷ್ಮೆ ಕೃಷಿಯು ಹೆಚ್ಚು ಕಡಿಮೆ ಕೃಷಿ ಹಾಗೂ ತೋಟಗಾರಿಕೆಗೆ ಚಟುವಟಿಕೆಗಳಿಗೆ ತತ್ಸಮಾನವಾಗಿರುತ್ತದೆ. ತೋಟಗಾರಿಕೆ ಕ್ಷೇತ್ರಕ್ಕೆ ಸಿಕ್ಕಿರುವಂತಹ ಪ್ರಾಶಸ್ತ್ಯವು ರೇಷ್ಮೆ ಕೃಷಿಗೆ ದೊರಕುವುದರಿಂದ ರೇಷ್ಮೆ ಅಭಿವೃದ್ಧಿಯಲ್ಲಿ ಹೆಚ್ಚಿನ ಪ್ರಗತಿ ಸಾಧಿಸಲು ಸಾಧ್ಯವಾಗುವುದು.

ಆದ್ದರಿಂದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಡಿಯಲ್ಲಿ ಈವರೆವಿಗೆ ನಿರ್ವಹಿಸುತ್ತಿರುವ "ರೇಷ್ಮೆ ಕೃಷಿ" ವಿಷಯವನ್ನು ತೋಟಗಾರಿಕೆ ಇಲಾಖೆಗೆ ವರ್ಗಾವಣೆ ಮಾಡಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಡಿಸಿಎ 3 ಎಆರ್‌ಬಿ 2011, ಬೆಂಗಳೂರು, ದಿನಾಂಕ : 24-5-2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿ ನಿರ್ವಹಿಸಲ್ಪಡುತ್ತಿರುವ "ರೇಷ್ಮೆ ಕೃಷಿ"ಗೆ ಸಂಬಂಧಪಟ್ಟ ವಿಷಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೋಟಗಾರಿಕೆ ಇಲಾಖೆಗೆ ವರ್ಗಾಯಿಸಿದೆ.

ಈ ಬಗ್ಗೆ ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು 1977ಕ್ಕೆ ಸೂಕ್ತವಾದ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು-2)

ಪಿ.ಆರ್. 1466

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್. ಎಸ್. ಖಿಣಗಾವಿ, ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್, ಇವರುಗಳ ವಿರುದ್ಧದ ಇಲಾಖಾ ವಿಚಾರಣೆಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶ್ರೀ ಎಸ್. ಎಸ್. ಖಿಣಗಾವಿ, ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಇವರುಗಳಿಗೆ ಜಾರಿ ಮಾಡಲಾದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಿಆಸುಇ 24 ಇಮುವಿ 2008, ದಿನಾಂಕ 01-07-2008.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 24 ಇಮುವಿ 2008, ದಿನಾಂಕ 17-07-2010
3. ಶ್ರೀ ಎಸ್. ವೈ. ಕುಂಬಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿ, ಇವರ ವಿಚಾರಣ ವರದಿ ಮತ್ತು ಪತ್ರ ದಿನಾಂಕ 14-02-2011.

**ಪ್ರಸ್ತಾವನೆ :**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಅವರು, ದಿನಾಂಕ 24-06-2009 ರಂದು ಸಿ.ಆ.ಸು. ಇಲಾಖೆಗೆ ಕಳುಹಿಸಿದ ಪ್ರಸ್ತಾವನೆಯಲ್ಲಿ ಕರ್ನಾಟಕ ನೀರಾವರಿ ನಿಗಮ ನಿಯಮಿತ, ನೀರಾವರಿ (ಉತ್ತರ ವಲಯ) ಬೆಳಗಾವಿ, ಇಲ್ಲಿ ಶ್ರೀ ಎಸ್. ಎಸ್. ಖಿಣಗಾವಿ, ಮುಖ್ಯ ಇಂಜಿನಿಯರ್ ಇವರು ದಿನಾಂಕ 08-05-2006 ರಿಂದ 05-07-2007 ರವರೆಗೆ ಅಧೀಕ್ಷಕ ಇಂಜಿನಿಯರ್ ಆಗಿ ಮತ್ತು ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್, ಇವರು ದಿನಾಂಕ 17-05-2007 ರಿಂದ 31-08-2007 ರವರೆಗೆ ಮುಖ್ಯ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಬಳ್ಳಾರಿ ನಾಲಾ ಅಣೆಕಟ್ಟು ಹಾಗೂ ಕಾರ್ಯ ಯೋಜನೆ ಕಾಮಗಾರಿಗಳನ್ನು ನಿರ್ವಹಿಸುವಾಗ ಕಾಮಗಾರಿಗಳ ಪರಿಮಾಣಗಳ ನಿಖರತೆ ಹಾಗೂ ತೃಪ್ತಿಕರ ಗುಣಮಟ್ಟದ ಬಗ್ಗೆ ಮನದಟ್ಟು ಮಾಡಿಕೊಳ್ಳದೇ ಕೇವಲ ಅಕ್ಷೇಪಣೆಗಳನ್ನು ದಾಖಲಿಸಿದ ಅಣೆಕಟ್ಟು ಹಾಗೂ ನಾಲಾ ನಿರ್ಮಾಣ ಕಾರ್ಯದ ಲೈನ್ ಅಂದಾಜು ಪ್ರಕ್ರಿಯೆ ಮಂಜೂರಾತಿಯಂತೆ ಕಾಂಪೊನೆಂಟ್ ವೈಸ್ ವಿನ್ಯಾಸ ನಕ್ಷೆ ಮತ್ತು ಅಂದಾಜುಗಳನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯದ ಕಾಮಗಾರಿಗಳನ್ನು 2 ವರ್ಷಗಳೊಳಗೆ ಮುಗಿಸಲು ಹಾಕಿಕೊಂಡ ಕಾರ್ಯಕ್ರಮ ಪಟ್ಟಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದ ಹಾಗೂ ಗುತ್ತಿಗೆದಾರರೊಂದಿಗೆ ಯಾವುದೇ ಪತ್ರ ವ್ಯವಹಾರ ಮಾಡದ ಪ್ರಾರಂಭವಾದ 3 ವರ್ಷಗಳ ನಂತರವೂ ಕಾಮಗಾರಿಯ ಅಂದಾಜು ಪೂರ್ಣಗೊಳ್ಳದ ಬಗ್ಗೆ ಪ್ರಗತಿ ಪರಿಶೀಲನಾ ಸಭೆಯಲ್ಲಾಗಲೀ ಎಂ.ಎಂ.ಆರ್. ಸಭೆಯಲ್ಲಾಗಲೀ ಪರಿಶೀಲಿಸದೆ ಉಳಿದ ಕಾಮಗಾರಿಯ ಸ್ಥಳಕ್ಕೆ ತಿಂಗಳಿಗೆ ಒಮ್ಮೆಯಾದರೂ ಭೇಟಿ ನೀಡದೇ ರೂ. 21.83 ಕೋಟಿಗಳಷ್ಟು ಮೊತ್ತವನ್ನು ಸರ್ಕಾರಕ್ಕೆ ನಷ್ಟ ಉಂಟುಮಾಡಿದ ಆರೋಪಗಳ ಕುರಿತಂತೆ ಆರೋಪಿತ ಅಧಿಕಾರಿಗಳಿಗೆ ಮೇಲೆ ಓದಲಾದ ಉಲ್ಲೇಖ (1)ರಲ್ಲಿ ನೋಟೀಸ್ ಜಾರಿ ಮಾಡುವ ಮೂಲಕ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭವಾಯಿತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಗಳು ಆರೋಪಗಳನ್ನು ನಿರಾಕರಿಸಿರುವುದರಿಂದ ಸದರಿ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ವೈ. ಕುಂಬಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ದಿನಾಂಕ 17-07-2010ರಂದು ನೇಮಿಸಲಾಗಿದೆ. ಅದರಂತೆ ವಿಚಾರಣೆ ನಡೆಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ 14-02-2011 ರಲ್ಲಿ ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಸದರಿ ವರದಿಯಲ್ಲಿ ಆರೋಪಿತ ಅಧಿಕಾರಿಗಳು ಕಾಮಗಾರಿಗಳನ್ನು ಪರಿಶೀಲನೆ ಮಾಡಿ ಹಲವು ಸಭೆಗಳನ್ನು ನಡೆಸಿರುವುದು ಸಾಕ್ಷಾಧಾರಗಳಿಂದ ಧೃಡಪಟ್ಟಿರುತ್ತದೆ. ಆದ್ದರಿಂದ ಕರ್ತವ್ಯ ಲೋಪ ಎಸಗಿರುವುದಿಲ್ಲ ಹಾಗೂ ಡಿ. ಕೋಡ್ ಅನುಸಾರ ಕಾಮಗಾರಿಗಳನ್ನು ನಿರ್ವಹಿಸುವುದು ಕಾರ್ಯಪಾಲಕ ಅಭಿಯಂತರರು, ಸಹಾಯಕ ಕಾರ್ಯಪಾಲಕ ಅಭಿಯಂತರರು ಮತ್ತು ಸಹಾಯಕ ಅಭಿಯಂತರರ ಜವಾಬ್ದಾರಿಯಾಗಿದ್ದು, ಮುಖ್ಯ ಇಂಜಿನಿಯರ್‌ಗಳು ಜವಾಬ್ದಾರರಲ್ಲ ಆದ್ದರಿಂದ ಡಿ. ಕೋಡ್ ಉಲ್ಲಂಘನೆ ಆರೋಪಗಳು ಸಾಬೀತಾಗಿಲ್ಲವೆಂದು ಯೋಜನೆಗಳಿಗೆ ಸಂಬಂಧಿಸಿದಂತೆ ನಕ್ಷೆ ಮತ್ತು ವಿನ್ಯಾಸಗಳಿಗೆ ಅನುಮೋದನೆಯನ್ನು ಪಡೆಯುವುದು ಕಾರ್ಯಪಾಲಕ ಅಭಿಯಂತರರ ಕರ್ತವ್ಯವಾಗಿರುವುದರಿಂದ ಆರೋಪಿತ ಅಧಿಕಾರಿಗಳು ಯವುದೇ ಕಾನೂನು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿರುವುದು ಕಂಡುಬಂದಿರುವುದಿಲ್ಲ. ವಿಚಾರಣೆ ಸಮಯದಲ್ಲಿ ಸಾಕ್ಷಿಗಳ ಹೇಳಿಕೆಯನ್ನು ಪರಿಶೀಲಿಸಿದಾಗ ಆರೋಪಿತ ಅಧಿಕಾರಿಗಳು ಲೋಕೋಪಯೋಗಿ ಸಂಹಿತೆಯನ್ನು ಉಲ್ಲಂಘಿಸಿರುವುದು ಕಂಡುಬರುವುದಿಲ್ಲ. ಇದಲ್ಲದೆ ಆರೋಪಿತ ಇಬ್ಬರು ಅಧಿಕಾರಿಗಳು ಯಾವುದೇ ಮೊತ್ತದ ಬಿಲ್ಲನ್ನು ತೀರುವಳಿಮಾಡಿರುವುದಿಲ್ಲ ಸದರಿ ಬಿಲ್ಲುಗಳ ಪಾವತಿ ಬಗ್ಗೆ ಹಲವು ಆಕ್ಷೇಪಗಳನ್ನು ಮಾಡಿ ಸಾಕಷ್ಟು ಮಾಹಿತಿಯನ್ನು ಕೋರಿರುತ್ತಾರೆ. ಕಾರ್ಯಪಾಲಕ ಇಂಜಿನಿಯರ್‌ಗಳು ಈ ಆಕ್ಷೇಪಗಳಿಗೆ ಯಾವುದೇ

ಉತ್ತರ ನೀಡದೇ ಮುಖ್ಯ ಲೆಕ್ಕಾಧಿಕಾರಿಯಿಂದ ಹಣ ಪಡೆದುಕೊಂಡು ಮುಂದಿನ ಕ್ರಮ ಜರುಗಿಸಿರುತ್ತಾರೆ. ಇದರಿಂದ ಸದರಿ ಪ್ರಕರಣದಲ್ಲಿ ಶ್ರೀ ಎನ್. ನಾಗಣ್ಣ ಮತ್ತು ಶ್ರೀ ಎಸ್. ಎಸ್. ಖಣಗಾವಿ ಇವರು ಯಾವುದೇ ಪಾತ್ರ ಇಲ್ಲದೇ ಇರುವುದು ಸುಸ್ಪಷ್ಟವಾಗಿದೆ ಎಂದು ವಿಚಾರಣಾ ವರದಿಯಲ್ಲಿ ತಿಳಿಸಿ ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಮತ್ತು ಶ್ರೀ ಎಸ್. ಎಸ್. ಖಣಗಾವಿ, ಮುಖ್ಯ ಇಂಜಿನಿಯರ್, ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ನಿರ್ಣಯಕ್ಕೆ ಬಂದಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ ವಿಚಾರಣಾ ವರದಿಯನ್ನು ಒಪ್ಪದೇ ಇರುವ ಯಾವುದೇ ಸಮರ್ಥನೀಯ ಸಾಕ್ಷಾಧಾರಗಳು ಇಲ್ಲದಿರುವುದನ್ನು ಮನಗಂಡ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 24 ಇಮುವಿ 2008, ಬೆಂಗಳೂರು, ದಿನಾಂಕ : 28-05-2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಸ್. ಎಸ್. ಖಣಗಾವಿ, ಮುಖ್ಯ ಇಂಜಿನಿಯರ್ ಮತ್ತು ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಅವರುಗಳನ್ನು ಈ ಪ್ರಕರಣದಲ್ಲಿ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಎಸ್. ಎಸ್. ಖಣಗಾವಿ, ಮುಖ್ಯ ಇಂಜಿನಿಯರ್ ಮತ್ತು ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-3)

ಪಿ.ಆರ್. 1467

## ಆರ್ಥಿಕ ಸಚಿವಾಲಯ

**ವಿಷಯ :** ಧಾರವಾಡ ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕ ಪರಿಶೋಧಕರ ಕಚೇರಿಯ ಹಂಗಾಮಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅದೇಶ ಸಂಖ್ಯೆ: ಆಇ 18 ರಾಲೆಪ 88, ದಿನಾಂಕ 30-8-1989
2. ಸರ್ಕಾರದ ಅದೇಶ ಸಂಖ್ಯೆ: ಆಇ 16 ರಾಲೆಪ 2005, ದಿನಾಂಕ 02-03-2006
3. ಸರ್ಕಾರದ ಅದೇಶ ಸಂಖ್ಯೆ: ಆಇ 282 ರಾಲೆಪ 2006, ದಿನಾಂಕ 20-12-2006
4. ಸರ್ಕಾರದ ಅದೇಶ ಸಂಖ್ಯೆ: ಆಇ 228 ರಾಲೆಪ 2009, ದಿನಾಂಕ 26-8-2010
5. ನಿಯಂತ್ರಕರ ಪತ್ರ ಸಂಖ್ಯೆ: ರಾಲೆಪ 1 ಇಟಿಪಿ 87/2011/309, ದಿನಾಂಕ 21-04-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿನ ಆದೇಶಾನುಸಾರ ಧಾರವಾಡ ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯು ಅಸ್ತಿತ್ವಕ್ಕೆ ಬಂದಿದ್ದು, ಅಂದಿನಿಂದಲೂ 11 ಹುದ್ದೆಗಳನ್ನು ಮುಂದುವರಿಸಿಕೊಂಡು ಬರಲಾಗಿದ್ದು, ಕ್ರಮಾಂಕ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಒಂದು ಲೆಕ್ಕಪರಿಶೋಧನಾ ಅಧಿಕಾರಿಯ ಹುದ್ದೆಯನ್ನು ರದ್ದುಪಡಿಸಲಾಗಿದೆ. ಉಳಿದ 10 ಹುದ್ದೆಗಳನ್ನು ಮುಂದುವರಿಸಿಕೊಂಡು ಬರಲಾಗಿದ್ದು, ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಆದೇಶದಲ್ಲಿ ದಿನಾಂಕ 31-03-2011ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಈ ಹುದ್ದೆಗಳನ್ನು ದಿನಾಂಕ 01-04-2011 ರಿಂದ ಒಂದು ವರ್ಷದವರೆಗೆ (31-03-2012) ತಾತ್ಕಾಲಿಕವಾಗಿ ಮುಂದುವರೆಸಬೇಕೆಂದು ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಮೇಲಿನ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಹುದ್ದೆ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|
| 01 | ಸರ್ಕಾರಿ ಲೆಕ್ಕ ಪರಿಶೋಧಕರು (ಸಹಾಯಕ ನಿಯಂತ್ರಕರ ವೇತನ ಶ್ರೇಣಿ ರೂ. 14050-25050) | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು (ರೂ. 11400-21600) | 02 |
| 03 | ಪ್ರಥಮ ದರ್ಜೆ ಸಹಾಯಕರು (ರೂ. 7275-13350) | 06 |
| 04 | ದ್ವಿತೀಯ ದರ್ಜೆ ಸಹಾಯಕರು (ರೂ. 5800-10500) | 01 |
| | ಒಟ್ಟು | 10 ಹುದ್ದೆಗಳು |

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಆಇ 126 ರಾಲೆಪ 2011, ಬೆಂಗಳೂರು, ದಿನಾಂಕ : 31-05-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಧಾರವಾಡ ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕ ಪರಿಶೋಧಕರ ಕಚೇರಿಯ ಈ ಕೆಳಕಂಡ 10 ಹುದ್ದೆಗಳನ್ನು ದಿನಾಂಕ 01-04-2011 ರಿಂದ 31-03-2012 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಿದೆ.

| ಕ್ರಮ ಸಂಖ್ಯೆ | ಹುದ್ದೆ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|
| 01 | ಸರ್ಕಾರಿ ಲೆಕ್ಕ ಪರಿಶೋಧಕರು (ಸಹಾಯಕ ನಿಯಂತ್ರಕರ ವೇತನ ಶ್ರೇಣಿ ರೂ. 14050-25050) | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು (ರೂ. 11400-21600) | 02 |

| | | |
|---|---|---|
| 03 | ಪ್ರಥಮ ದರ್ಜೆ ಸಹಾಯಕರು (ರೂ. 7275–13350) | 06 |
| 04 | ದ್ವಿತೀಯ ದರ್ಜೆ ಸಹಾಯಕರು (ರೂ. 5800–10500) | 01 |
| | ಒಟ್ಟು | 10 ಹುದ್ದೆಗಳು |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 1–7–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1468 ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವರ್ಗಾವಣೆ–ಅರ್ಜಿ ಸಂಖ್ಯೆ: 1695/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ ಪ್ರಕರಣದ ಮರುಪರಿಶೀಲನೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಆಇ 104 ಅಖಇ 2009, ದಿನಾಂಕ 5–9–2009
2. ಅಧಿಸೂಚನೆ ಸಂಖ್ಯೆ: ಆಇ 167 ಅಖಇ 2009, ದಿನಾಂಕ 23–1–2010
3. ಅರ್ಜಿ ಸಂಖ್ಯೆ: 1695/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿದ ದಿನಾಂಕ 6–10–2010ರ ಆದೇಶ.

**ಪ್ರಸ್ತಾವನೆ :**

ಜಿಲ್ಲಾ ಖಜಾನಾಧಿಕಾರಿ, ಕೊಪ್ಪಳ ಈ ಹುದ್ದೆಯಲ್ಲಿ ದಿನಾಂಕ 3–5–2004 ರಿಂದ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಸಿ. ವಿನಯಕುಮಾರ್ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 5–9–2009ರ ಅಧಿಸೂಚನೆಯಲ್ಲಿ ವರ್ಗಾಯಿಸಿ ಜಿಲ್ಲಾ ಖಜಾನಾಧಿಕಾರಿ, ಉಡುಪಿ ಈ ಹುದ್ದೆಗೆ ನೇಮಿಸಲಾಯಿತು. ಇದನ್ನು ಪ್ರಶ್ನಿಸಿ ಅಧಿಕಾರಿಯು ಸಲ್ಲಿಸಿದ ಅರ್ಜಿ ಸಂಖ್ಯೆ: 4075/2009ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 9–9–2009 ರಂದು ನೀಡಿದ ಆದೇಶದಂತೆ ಅಧಿಕಾರಿಯ ದಿನಾಂಕ 8–9–2009ರ ಮನವಿಯನ್ನು ಪರಿಗಣಿಸಿದ ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ 23–1–2010ರ ಅಧಿಸೂಚನೆ ಹೊರಡಿಸಿ ಅವರನ್ನು ಜಿಲ್ಲಾ ಖಜಾನಾಧಿಕಾರಿ, ಉಡುಪಿ ಈ ಹುದ್ದೆಗೆ ದಿನಾಂಕ 5–9–2009ರ ಅಧಿಸೂಚನೆಯಲ್ಲಿ ವರ್ಗಾಯಿಸಿದ್ದನ್ನು ಸ್ಥಿರೀಕರಿಸಲಾಯಿತು ಈ ಕ್ರಮವನ್ನು ಪ್ರಶ್ನಿಸಿ ಶ್ರೀ ಸಿ. ವಿನಯಕುಮಾರ್ ಅವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 1695/2010ನ್ನು ಸಲ್ಲಿಸಿದರು. ಮಂಡಳಿಯು ತನ್ನ ದಿನಾಂಕ 1–3–2010ರ ಮಧ್ಯಂತರ ಆದೇಶ ಹೊರಡಿಸಿ ದಿನಾಂಕ 23–1–2010ರ ಅಧಿಸೂಚನೆಗೆ ಮಧ್ಯಂತರ ತಡೆಯಾಜ್ಞೆ ನೀಡಿತು. ಅನಂತರ ಮೇಲೆ (3)ರಲ್ಲಿ ಓದಲಾದ ದಿನಾಂಕ 6–10–2010ರ ತನ್ನ ಆದೇಶದಲ್ಲಿ ಈ ಕೆಳಕಂಡ ನಿರ್ದೇಶನದೊಡನೆ ಅರ್ಜಿಯನ್ನು ಇತ್ಯರ್ಥಗೊಳಿಸಿದೆ.

(i) The Application is disposed of;

(ii) The Respondent Nos. 1 & 2 & CMA are directed to review and reconsider the case of the Applicant for transfer taking into account the facts relating to the Applicant with reference to the provisions contained in para 6.1(3) and para 7.1(f) of the Government Order dated 22-11-2001 relating to transfers and pass an appropriate order in accordance with law as per the Government Order dated 22-11-2001 and related Government Orders and Circulars within 4 weeks from the date of receipt of the certified copy of this order by the Respondent No's. 1 and 2;

(iii) The interim order of stay of the impugned order No. ಆಇ 167 ಅಖಇ 2009, dated 23-01-2010 granted shall be continued till the CMA takes a decision as directed in para (ii) above and appropriate order is passed in pursuance to the recommendation of the CMA in this regard.

ಮಂಡಳಿಯ ಮೇಲಿನ ಆದೇಶದಿಂದಾಗಿ ವೃಂದ ನಿರ್ವಹಣಾ ಪ್ರಾಧಿಕಾರವು ಶ್ರೀ ಸಿ. ವಿನಯಕುಮಾರ್ ಜಿಲ್ಲಾ ಖಜಾನಾಧಿಕಾರಿ ಅವರ ಪ್ರಕರಣವನ್ನು ದಿನಾಂಕ 22–11–2001ರ ಆದೇಶದ ಬೆಳಕಿನಲ್ಲಿ ಪರಿಶೀಲಿಸಿದೆ. ಆದೇಶದ ಕಂಡಿಕೆ 6.1(3)ರನ್ವಯ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಪದಾಧಿಕಾರಿಯಾಗಿರುವ ಸರ್ಕಾರಿ ನೌಕರನನ್ನು ಆತನು ಚುನಾಯಿತನಾಗಿರುವ ಅವಧಿ ಮುಗಿಯುವವರೆಗೂ ಆತನನ್ನು ವರ್ಗಾಯಿಸುವಂತಿಲ್ಲ. ಕಂಡಿಕೆ 7(1)(ಎಫ್)ರನ್ವಯ ಇಲಾಖಾ ವಿಚಾರಣೆ ಕ್ರಿಮಿನಲ್ ಮೊಕದ್ದಮೆ ಹೂಡಿರುವ ಇಲ್ಲವೇ ಹೂಡುವ ಪ್ರಸ್ತಾವನೆ ಇರುವ ಪ್ರಕರಣಗಳಲ್ಲಿ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡುವುದಕ್ಕೆ ಬದಲಾಗಿ ವರ್ಗಾವಣೆ ಮಾಡಬಹುದೆಂದು ನೇಮಕಾತಿ ಪ್ರಾಧಿಕಾರಿ ಅಭಿಪ್ರಾಯ ಪಟ್ಟಲ್ಲಿ ಅಂತಹ ನೌಕರನನ್ನು ವರ್ಗಾಯಿಸಬಹುದು ಈ ಅಂಶಗಳನ್ನು ಪರಿಗಣಿಸಿದಲ್ಲಿ ಶ್ರೀ ಸಿ. ವಿನಯಕುಮಾರ್ ಅವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಕೊಪ್ಪಳ ಜಿಲ್ಲಾ ಶಾಖೆಗೆ ಖಜಾನೆ ಇಲಾಖೆ ವತಿಯಿಂದ 2007–12ನೇ ಸಾಲಿಗೆ ಚುನಾಯಿತರಾಗಿದ್ದು ಪ್ರಥಮ ಬಾರಿಗೆ ಸಂಘಟನಾ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯಾಗಲೀ ಕ್ರಿಮಿನಲ್ ಮೊಕದ್ದಮೆಯಾಗಲೀ ಬಾಕಿ ಇರುವುದಿಲ್ಲ. ಸರ್ಕಾರಿ ನೌಕರರು ಸಂಘದ ಪದಾಧಿಕಾರಿಗಳಾಗಿದ್ದಲ್ಲಿ ಅವರನ್ನು ಅವಧಿ ಮುಗಿಯುವವರೆಗೆ ವರ್ಗಾಯಿಸಬಾರದೆಂದು ವರ್ಗಾವಣೆ ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿದೆ.

ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ ಅವರು 'ಎ' ಗುಂಪಿನ ಅಧಿಕಾರಿಯಾಗಿದ್ದು ಕೊಪ್ಪಳದಲ್ಲಿ ದಿನಾಂಕ 3–5–2004 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ದಿನಾಂಕ 22–11–2001ರ ಸರ್ಕಾರಿ ಆದೇಶದ ಕಂಡಿಕೆ 3.2ರಲ್ಲಿ ನಿಗಧಿಪಡಿಸಿರುವ ಕನಿಷ್ಠ 3 ವರ್ಷಗಳ ಅವಧಿಯನ್ನು ಕೊಪ್ಪಳದಲ್ಲಿ ಪೂರೈಸಿದ್ದಾರೆ. ಆದಾಗ್ಯೂ ಸಾರ್ವಜನಿಕ ದೂರಿನ ಮೇರೆಗೆ ಇವರನ್ನು ವರ್ಗಾವಣೆ ಮಾಡಿರುವುದರಿಂದ ಅವರನ್ನು ಕೊಪ್ಪಳದಲ್ಲಿಯೇ

ಮುಂದುವರಿಸುವುದು ಆಡಳಿತಾತ್ಮಕ ಹಿತದೃಷ್ಟಿಯಿಂದ ಸೂಕ್ತವಾಗುವುದಿಲ್ಲ. ಈ ಎಲ್ಲಾ ಅಂಶಗಳನ್ನು ಅರ್ಜಿ ಸಂಖ್ಯೆ: 1695/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 6–10–2010ರಲ್ಲಿ ನೀಡಿದ ಆದೇಶವನ್ನು ಗಮನದಲ್ಲಿಟ್ಟುಕೊಂಡು ವೃಂದ ನಿರ್ವಹಣಾ ಪ್ರಾಧಿಕಾರವು ಪರಿಶೀಲಿಸಿ ಸಲ್ಲಿಸಿರುವ ಅಭಿಪ್ರಾಯವನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 73 ಅಖಇ 2010, ಬೆಂಗಳೂರು, ದಿನಾಂಕ : 31–05–2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ವಾಸ್ತವಾಂಶಗಳಿಂದಾಗಿ ಸರ್ಕಾರವು ಅಧಿಸೂಚನೆ ಸಂಖ್ಯೆ: ಆಇ 104 ಆಖಇ 2009, ದಿನಾಂಕ 5–9–2009ರಲ್ಲಿ ಶ್ರೀ ಸಿ. ವಿನಯಕುಮಾರ್, ಜಿಲ್ಲಾ ಖಜಾನಾಧಿಕಾರಿ ಅವರನ್ನು ಕೊಪ್ಪಳ ಜಿಲ್ಲಾ ಖಜಾನೆಯಿಂದ ಉಡುಪಿ ಜಿಲ್ಲಾ ಖಜಾನೆಗೆ ವರ್ಗಾಯಿಸಿರುವುದನ್ನು ಜಾರಿಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1469 ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಡಾ॥ ಮಧು, ಎನ್.ಟಿ., ಪಶುವೈದ್ಯಾಧಿಕಾರಿ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವಿಕೆ

**ಓದಲಾಗಿದೆ :** (1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಪಸಂಮೀ 263 ಪಸಸೇ 2007, ದಿನಾಂಕ 26–06–2009

(2) ಸರ್ಕಾರಿ ಪತ್ರ ಸಂಖ್ಯೆ: ಪಸಂಮೀ 406 ಪಸಸೇ 2009, ದಿನಾಂಕ 02–09–2009

(3) ಡಾ॥ ಮಧು ಎನ್. ಟಿ., ಪಶುವೈದಾಧಿಕಾರಿ ಇವರ ಮನವಿ ದಿನಾಂಕ 16–08–2010

(4) ಸರ್ಕಾರಿ ಪತ್ರ ಸಂಖ್ಯೆ: ಪಸಂಮೀ 357 ಪಸಸೇ 2010, ದಿನಾಂಕ 15–09–2010

(5) ಪತ್ರ ಸಂಖ್ಯೆ: ಅಪಸಂ/ಸಿಬ್ಬಂದಿ–2/ವಿವ–95/2008–09, ದಿನಾಂಕ 24–02–2011

**ಪ್ರಸ್ತಾವನೆ :**

ಡಾ॥ ಮಧು, ಎನ್.ಟಿ., ಇವರು ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪಶುವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಯಾಗಿದ್ದು ಅವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಪಶುಚಿಕಿತ್ಸಾಲಯ, ಮಾಚಗೊಂಡನಹಳ್ಳಿ, ಚಿಕ್ಕಮಗಳೂರು ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಲಾಗಿತ್ತು ಹಾಗೂ ನೇಮಕಾತಿ ಆದೇಶ ಸ್ವೀಕರಿಸಿದ 15 ದಿನಗಳ ಒಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಡಾ॥ ಮಧು ಎನ್. ಟಿ. ಇವರು ಎಂ.ವಿ.ಎಸ್ಸಿ., ಉನ್ನತ ವ್ಯಾಸಂಗ ಪೂರ್ಣಗೊಳುಸುವ ಸಲುವಾಗಿ ಪಶುವೈದ್ಯಾಧಿಕಾರಿ ಹುದ್ದೆಯ ಕರ್ತವ್ಯಕ್ಕೆ ಹಾಜರಾಗಲು ಕಾಲಾವಕಾಶ ವಿಸ್ತರಿಸುವಂತೆ ಕೋರಿದ ಮೇರೆಗೆ, ಅದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ಅಧಿಕಾರಿಗೆ ಪಶುವೈದ್ಯಾಧಿಕಾರಿ ಹುದ್ದೆಗೆ ಹಾಜರಾಗಲು ದಿನಾಂಕ 25–07–2009 ರಿಂದ ದಿನಾಂಕ 31–08–2010ರವರೆಗೆ ಕಾಲಾವಕಾಶ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರನ್ವಯ ಡಾ॥ ಮಧು, ಎನ್.ಟಿ. ಇವರು ಮೇಲೆ ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಅವರು ಕರ್ನಾಟಕ ಲೋಕಸೇವಾ ಆಯೋಗ ನಡೆಸಿದ ಕೆ.ಎ.ಎಸ್. ಆರಂಭಿಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದು ಮುಖ್ಯ ಪರೀಕ್ಷೆಯು ಡಿಸೆಂಬರ್ ತಿಂಗಳಿನಲ್ಲಿ ನಡೆಯುವ ನಿರೀಕ್ಷೆಯಿರುವುದರಿಂದ ಅದರ ತಯಾರಿಗಾಗಿ ಪಶುವೈದ್ಯಾಧಿಕಾರಿ ಹುದ್ದೆಗೆ ಹಾಜರಾಗಲು ಇನ್ನೂ 4 ತಿಂಗಳು ಅಂದರೆ ದಿನಾಂಕ 30–08–2010 ರಿಂದ ದಿನಾಂಕ 31–12–2010 ರವರೆಗೆ ಕಾಲಾವಕಾಶ ವಿಸ್ತರಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಇಲಾಖೆಯಲ್ಲಿ ಸಾಕಷ್ಟು ಪಶುವೈದ್ಯಾಧಿಕಾರಿ ಹುದ್ದೆಗಳು ಖಾಲಿ ಇರುವುದರಿಂದ ಡಾ॥ ಮಧು, ಎನ್.ಟಿ. ಇವರ ಕಾಲಾವಕಾಶ ವಿಸ್ತರಣೆ ಮನವಿಯನ್ನು ತಿರಸ್ಕರಿಸಿ ನಿಯುಕ್ತಿಗೊಳಿಸಿದ ಸ್ಥಳದಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು ಹಾಗೂ ಒಂದು ವೇಳೆ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ನಿಯಮಾನುಸಾರ ನೇಮಕಾತಿ ಆದೇಶವನ್ನು ರದ್ದುಪಡಿಸುವುದಾಗಿ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಡಾ॥ ಮಧು, ಎನ್. ಟಿ. ರವರು ನಿಯುಕ್ತಿಗೊಳಿಸಿದ ಸ್ಥಳ ಪಶುಚಿಕಿತ್ಸಾಲಯ, ಮಾಚಗೊಂಡನಹಳ್ಳಿ, ಚಿಕ್ಕಮಗಳೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಡಾ॥ ಮಧು, ಎನ್.ಟಿ. ಅವರು ಇದುವರೆಗೂ ನಿಯುಕ್ತಿಗೊಳಿಸಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಸದರಿಯವರಿಗೆ ಪಶುವೈದ್ಯಾಧಿಕಾರಿ ಹುದ್ದೆಗೆ ಹಾಜರಾಗಲು ಈಗಾಗಲೇ ಒಂದು ಬಾರಿ ಕಾಲಾವಕಾಶ ವಿಸ್ತರಿಸಲಾಗಿದ್ದು, ಅದು ದಿನಾಂಕ 31–12–2010ಕ್ಕೆ ಮುಕ್ತಾಯಗೊಂಡಿರುತ್ತದೆ. ವೈಯಕ್ತಿಕ ಕಾರಣಗಳಿಗಾಗಿ ಮತ್ತೆ 4 ತಿಂಗಳ ಅವಧಿಗೆ ಕರ್ತವ್ಯಕ್ಕೆ ಹಾಜರಾಗಲು ಕಾಲಾವಕಾಶ ಕೋರಿದ್ದು ಇಲಾಖಾ ಹಿತದೃಷ್ಟಿಯಿಂದ ಕಾಲಾವಕಾಶ ವಿಸ್ತರಣೆ ಕೋರಿಕೆಯನ್ನು ತಿರಸ್ಕರಿಸಿ ಕರ್ತವ್ಯಕ್ಕೆ ಹಾಜರಾಗಲು ಅಭ್ಯರ್ಥಿಗೆ ಸೂಚಿಸಲಾಗಿತ್ತು. ಆದರೆ ಅವರು ಸೂಚನಾ ಪತ್ರವನ್ನು ಸ್ವೀಕರಿಸದ ಕಾರಣ ಪತ್ರವು ವಾಪಸ್ಸು ಬಂದಿರುತ್ತದೆ. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಕುರಿತು ಸರ್ಕಾರಕ್ಕಾಗಲೀ ಅಥವಾ ಇಲಾಖಾ ಆಯುಕ್ತರಿಗಾಗಲೀ ಯಾವುದೇ ಮಾಹಿತಿ ನೀಡಿರುವುದಿಲ್ಲ. ಇದರಿಂದಾಗಿ ಡಾ॥ ಮಧು, ಎನ್.ಟಿ. ಅವರಿಗೆ ಸರ್ಕಾರಿ ಸೇವೆಗೆ ಸೇರಲು ಆಸಕ್ತಿ ಇಲ್ಲದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಡಾ॥ ಎನ್.ಟಿ. ಮಧು ಇವರ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತ ಎಂದು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 357 ಪಸಸೇ 2010, ಬೆಂಗಳೂರು, ದಿನಾಂಕ : 28–5–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಡಾ॥ ಮಧು, ಎನ್.ಟಿ. ಇವರು ಪಶುವೈದ್ಯಾಧಿಕಾರಿಯಾಗಿ ನಿಯುಕ್ತಿಗೊಳಿಸಿದ ಸ್ಥಳದಲ್ಲಿ ಇದುವರೆಗೂ ಕರ್ತವ್ಯಕ್ಕೆ ಹಾಜರಾಗದಿರುವುದರಿಂದ ಅವರ ನೇಮಕಾತಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಪಿ. ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

ಪಿ.ಆರ್. 1470

## INFRASTRUCTURE DEVELOPMENT SECRETARIAT

**Sub :** Constitution of High Level Co-Ordination Committee to expedite the implementation of railway projects in Karnataka.

**Read :** Proceedings of the meeting held on 20-4-2011 under the Chairmanship of Hon'ble Chief Minister of Karnataka regarding review of railway projects in the State.

**Preamble :**

In the meeting held on 20-04-2011 Hon'ble Chief Minister and Hon'ble Union Minister of State for Railways observed that even though the state Govt. has taken initiative to take up the projects on cost sharing basis (50:50 & 2/3rd) since 2002 and sufficient funds are released by Govt. of Karnataka for various cost sharing railway projects, the execution of the projects are happening at a very slow pace.

2. Railways are not in a position to utilize the States aware fully. The delay is due to problems in land acquisition, co-ordination between Railways and State Government and local authorities. The cost of projects is getting escalated (more than 3 fold) due to time over-runs.

3. To avoid the delay in execution of the projects and to speed up the implementation, it was decided that there is necessity of High Level co-ordination Committee to sort out the issues at the highest level and to have better co-ordination between Railways and State Government and hence this order:-

**Government Order No. : IDD 26 NSW 2011, Bangalore, dated 31-05-2011**

In the circumstances explained above, Government are pleased to constitute a High Level Co-ordination Committee under the Chairmanship of Chief Secretary to Government of Karnataka with following members:-

(I) The General Manager, SWR, Hubli … Member
(ii) The Principal Secretary to Govt. Finance Department … Member
(iii) The Principal Secretary to Govt. Revenue Department … Member
(iv) The Principal Secretary to Govt. Forest Department … Member
(v) The Principal Secretary to Govt. Horticulture Department … Member
(vi) The Principal Secretary to Govt. Public Works Department … Member
(vii) Concerned Regional Commissioners … Member
(viii) Concerned Deputy Commissioners … Member
(ix) The Chief Administrative Officer, SWR, Bangalore … Member
(x) The Chief Engineers (C & B) Public Works Department (Notrh & South) … Member
(xi) The Principal Secretary/Secretary to Govt. Infrastructure Development Department … Member Secretary
(xii) The Chief Administrative Officer, Construction, SWR, Bangalore … Member
(xiii) The Chief Administrative Officer, Construction, SCR, Secunderabad … Member
(xiv) The Chief Administrative Officer, Construction, Sothern Railway, Chennai. … Member
(xv) The Principal Chief Engineer, South Western Railway, Hubli … Member

The Committee shall meet at least once in a month and sort out pending issues with Railways ad State Government.

By Order and in the name of the Governor of Karnataka

**C. A. Baburavindranath Patel**

Under Secretary to Government

Infrastructure Development Department

P.R. 1471

**ಒಳಾಡಳಿತ ಸಚಿವಾಲಯ**

**ವಿಷಯ :** ಪಶ್ಚಿಮ ಬಂಗಾಳ ರಾಜ್ಯದಲ್ಲಿ ನಡೆದ ವಿಧಾನಸಭಾ ಚುನಾವಣೆ ಬಂದೋಬಸ್ತ್ ಕರ್ತವ್ಯಕ್ಕೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ 10 ಕಂಪನಿಗಳನ್ನು ನಿಯೋಜಿಸಿರುವ ಬಗ್ಗೆ ಘಟನೋತ್ತರ ಮಂಜೂರಾತಿ ಕುರಿತು.

**ಓದಲಾಗಿದೆ :** ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರ ಪತ್ರ ಸಂಖ್ಯೆ: 27/ಡಿಪ್ಲಾಯ್/ವಿ.ಚು/2010-11. ದಿನಾಂಕ 8-4-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರು ತಮ್ಮ ಪ್ರಸ್ತಾವನೆಯಲ್ಲಿ ಪಶ್ಚಿಮ ಬಂಗಾಳ ರಾಜ್ಯದಲ್ಲಿ ನಡೆದ ವಿಧಾನಸಭಾ ಚುನಾವಣೆಯ ವಿಶೇಷ ಬಂದೋಬಸ್ತ್‌ಗಾಗಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ ಹತ್ತು (10) ಕಂಪನಿಗಳನ್ನು ದಿನಾಂಕ 12-04-2011 ರಿಂದ 14-05-2011ರವರೆಗೆ ನಿಯೋಜಿಸಿದ್ದಕ್ಕೆ ಸಂಬಂಧಿಸಿದಂತೆ ಸರ್ಕಾರದಿಂದ ಘಟನೋತ್ತರ ಅನುಮೋದನೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 100 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ : 04-06-2011**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರು ಪಶ್ಚಿಮ ಬಂಗಾಳ ರಾಜ್ಯದಲ್ಲಿ ನಡೆದ ವಿಧಾಸಭಾ ಚುನಾವಣೆಯ ವಿಶೇಷ ಬಂದೋಬಸ್ತ್‌ಗಾಗಿ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ ಹತ್ತು (10) ಕಂಪನಿಗಳನ್ನು ನಿಯೋಜಿಸಿ ಹೊರಡಿಸಿದ್ದ ಆದೇಶ ಸಂಖ್ಯೆ: DEP/27/ELN/2010-11, ದಿನಾಂಕ 08-04-2011ಕ್ಕೆ ಸರ್ಕಾರವು ತನ್ನ ಘಟನೋತ್ತರ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ)

ಪಿ.ಆರ್. 1472

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು (ನಿವೃತ್ತ) ಮತ್ತು ಶ್ರೀ ಎಂ. ಹೆಚ್. ಕುಂಬಾರ, ಮುಖ್ಯ ವೀಕ್ಷಕರು (ನಿವೃತ್ತ) ಇವರ ವಿರುದ್ಧದ ಇಲಾಖಾ ಶಿಸ್ತಿನ ಕ್ರಮವನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ :**

1) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಆದೇಶ ಸಂಖ್ಯೆ: ಎನ್‌ಕ್ವೈಯರಿ/ಸಿಆರ್-5/2009, ದಿನಾಂಕ 21-05-2009.
2) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 42 ಪಿಆರ್‌ಇ 2009, ದಿನಾಂಕ 08-06-2009.
3) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಆದೇಶ ಸಂಖ್ಯೆ: ವಿಚಾರಣೆ/ಸಿ.ಆರ್.-5/2009-10, ದಿನಾಂಕ 06-08-2009.
4) ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿ ದಿನಾಂಕ 06-07-2009.
5) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ: ವಿಚಾರಣೆ/ಸಿ.ಆರ್.-5/2009, ದಿನಾಂಕ 21-07-2009.
6) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 42 ಪಿಆರ್‌ಇ 2009, ದಿನಾಂಕ 22-2-2010

**ಪ್ರಸ್ತಾವನೆ :**

ಬೆಳಗಾವಿ ಕೇಂದ್ರ ಕಾರಾಗೃಹದ ವಿಚಾರಣಾ ಬಂದಿ ಸಂಖ್ಯೆ: 6415 ನಾಗೇಂದ್ರರೆಡ್ಡಿ ತಂದೆ ಮದನಮೋಹನ ರೆಡ್ಡಿ, ಈತನನ್ನು ಒಳರೋಗಿಯಾಗಿ ಬೆಳಗಾವಿಯ ಜಿಲ್ಲಾ ಸರ್ಕಾರಿ ಆಸ್ಪತ್ರೆಗೆ ದಾಖಲಿಸಲಾಗಿತ್ತು. ಆಗ, ಈತನು ಅಲ್ಲಿ ಕರ್ತವ್ಯದ ಮೇಲಿದ್ದ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಪೊಲೀಸ್ ಪೇದೆ ಸಂಖ್ಯೆ: 84 ಶ್ರೀ ಚಂದ್ರಕಾಂತ್ ಎನ್. ಕಾಂಬ್ಳೆಯವರಿಗೆ ಇರಿದು, ಮಾರಣಾಂತಿಕ ಹಲ್ಲೆ ನಡೆಸಿ, ಪರಾರಿಯಾಗಿದ್ದನು, ಪೊಲೀಸ್ ಪೇದೆಯವರಿಗೆ ತುರ್ತು ಚಿಕಿತ್ಸೆಗಾಗಿ ಬೆಳಗಾವಿಯ ಕೆ.ಎಲ್.ಇ. ಆಸ್ಪತ್ರೆಗೆ ದಾಖಲಿಸಲಾಗಿತ್ತು. ಚಿಕಿತ್ಸೆ ಫಲಕಾರಿಯಾಗದೆ ಅವರು ಮರಣ ಹೊಂದಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ (1)ರ ಪತ್ರದೊಂದಿಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಈ ಘಟನೆಗೆ ಸಂಬಂಧಿಸಿದಂತೆ ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು ಮತ್ತು ಶ್ರೀ ಎಂ. ಹೆಚ್. ಕುಂಬಾರ್, ಮುಖ್ಯ ವೀಕ್ಷಕರು, ಬೆಳಗಾವಿ ಕೇಂದ್ರ ಕಾರಾಗೃಹ, ಬೆಳಗಾವಿ ಇವರು ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿದೆ ಎಂದೂ, ಸದರಿಯವರುಗಳ ವಿರುದ್ಧ ಸೂಕ್ತ ಶಿಸ್ತಿನ ಕ್ರಮ ತೆಗೆದುಕೊಳ್ಳಬೇಕೆಂದು ಕೋರಿದ್ದರು.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ವರದಿಯನ್ನು ಪರಿಶೀಲಿಸಿ ಮತ್ತು ವರದಿಯಲ್ಲಿನ ಅಂಶಗಳ ಆಧಾರದ ಮೇರೆಗೆ, ಸರ್ಕಾರವು ಮೇಲೆ ಓದಲಾದ (2)ರ ಆದೇಶದಲ್ಲಿ, ಶ್ರೀ ಡಿ. ಬಿ. ಕಡ್ಲಿ, ಮುಖ್ಯ ವೀಕ್ಷಕರು, ಬೆಳಗಾಂ ಕೇಂದ್ರ ಕಾರಾಗೃಹ ಹಾಗೂ ಶ್ರೀ ಎಂ. ಹೆಚ್. ಕುಂಬಾರ್, ಮುಖ್ಯ ವೀಕ್ಷಕರು, ಬೆಳಗಾಂ ಕೇಂದ್ರ ಕಾರಾಗೃಹ, ಇವರು ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡುಬಂದುದರ ಹಿನ್ನೆಲೆಯಲ್ಲಿ, ಸದರಿಯವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1) ರನ್ವಯ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಅನಂತರ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ (3)ರ ಅವರ ಆದೇಶದಲ್ಲಿ ಶ್ರೀ ಎಂ. ಹೆಚ್. ಕುಂಬಾರ್, ಮುಖ್ಯ ವೀಕ್ಷಕರು, ಬೆಳಗಾವಿ ಕೇಂದ್ರ ಕಾರಾಗೃಹ, ಬೆಳಗಾವಿ, ಇವರ ವಿರುದ್ಧ ಮುಂದೆ ಜರುಗತಕ್ಕ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(5)(ಸಿ)ರಲ್ಲಿನ ಅಧಿಕಾರವನ್ನು ಬಳಸಿ, ಸದರಿಯವರ ನಿಲಂಬನದ ಆದೇಶವನ್ನು ರದ್ದುಪಡಿಸಿ, ಬೆಳಗಾವಿ ಕೇಂದ್ರ ಕಾರಾಗೃಹದಲ್ಲಿಯೇ ಕರ್ತವ್ಯದಲ್ಲಿ ಮುಂದುವರೆಸಿರುತ್ತಾರೆ.

ಅಮಾನತ್ತಿಗೊಳಪಟ್ಟ ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು, ಇವರು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಮುಖೇನ ದಿನಾಂಕ 06–07–2009 ರಂದು ಸರ್ಕಾರಕ್ಕೆ ಸಲ್ಲಿಸಿದ ಮೇಲೆ (4)ರಲ್ಲಿ ಓದಲಾದ ಮನವಿಯಲ್ಲಿ ದಿನಾಂಕ 10–05–2009ರಂದು ನಡೆದ ಘಟನೆಯ ಬಗ್ಗೆ ವಾಸ್ತವಿಕ ಅಂಶಗಳನ್ನು ತಿಳಿಸುತ್ತಾ, ಸದರಿ ಘಟನೆಗೆ ಅವರು ಕಾರಣರಲ್ಲವೆಂದೂ, ಯಾವುದೇ ಕರ್ತವ್ಯಲೋಪವೆಸಗಿಲ್ಲವೆಂದು ತಿಳಿಸುತ್ತಾ ಅವರ ಅಮಾನತ್ತು ಆದೇಶವನ್ನು ರದ್ದುಪಡಿಸಿ ಕರ್ತವ್ಯಕ್ಕೆ ತೆಗೆದುಕೊಳ್ಳಬೇಕೆಂದು ಕೋರಿದ್ದರು.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲೆ ಓದಲಾದ (5)ರ ಪತ್ರದಲ್ಲಿ ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು ಇವರ ಮನವಿಯನ್ನು ಮಾನವೀಯತೆ ಮತ್ತು ಅನುಕಂಪದ ದೃಷ್ಟಿಯಿಂದ ಪರಿಗಣಿಸಿ, ಕಾರಾಗೃಹ ಇಲಾಖೆಯಲ್ಲಿ ಅಧಿಕಾರಿ/ಸಿಬ್ಬಂದಿಗಳ ಕೊರತೆ ಇರುವುದರಿಂದ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ರದ್ದುಪಡಿಸಿ, ಕರ್ತವ್ಯಕ್ಕೆ ತೆಗೆದುಕೊಳ್ಳುವಂತೆ ಕೋರಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಕೋರಿಕೆಯನ್ನು ಪರಿಶೀಲಿಸಿದ ಸರ್ಕಾರವು ಮೇಲೆ ಓದಲಾದ (6)ರ ಆದೇಶದಲ್ಲಿ ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(5)(ಸಿ)ರ ಅನ್ವಯ ಸದರಿಯವರ ಅಮಾನತ್ತನ್ನು ರದ್ದುಪಡಿಸಿ, ಬಳ್ಳಾರಿ ಕೇಂದ್ರ ಕಾರಾಗೃಹಕ್ಕೆ ಮುಖ್ಯ ಅಧೀಕ್ಷಕರ ಹುದ್ದೆಯಲ್ಲಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಆರೋಪಿತ ಅಧಿಕಾರಿ ಮತ್ತು ಸಿಬ್ಬಂದಿಯವರಾದ ಶ್ರೀ ಡಿ. ಬಿ. ಕಡ್ಲಿ ಮತ್ತು ಶ್ರೀ ಎಂ. ಹೆಚ್. ಕುಂಬಾರ್, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮಗಳನ್ವಯ ಮೇಲೆ ಓದಲಾದ (7)ರಲ್ಲಿ ಕಾರಣ ಕೇಳುವ ನೋಟೀಸನ್ನು ಆರೋಪಗಳ ಪಟ್ಟಿಯೊಂದಿಗೆ ಜಾರಿಗೊಳಿಸಿ ಪ್ರಸ್ತಾಪಿತ ನಿಯಮಾವಳಿಗಳ ನಿಯಮ II, II(ಎ) ಹಾಗೂ 13ರ ಮೇರೆಗೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಿ ಏಕೆ ಸೂಕ್ತ ಶಿಸ್ತಿನ ಕ್ರಮಗಳನ್ನು ತೆಗೆದುಕೊಳ್ಳಬಾರದು ಎಂಬುದಕ್ಕೆ ಸಮಜಾಯಿಷಿಯನ್ನು ಕಾರಣ ಕೇಳುವ ನೋಟೀಸ್ ತಲುಪಿದ 7 ದಿನಗಳೊಳಗೆ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಕಾರಣ ಕೇಳುವ ಸೂಚನೆಗೆ ಆರೋಪಿತ ಅಧಿಕಾರಿ ಮತ್ತು ಸಿಬ್ಬಂದಿಯವರು ಅವರ ಲಿಖಿತ ಸಮಜಾಯಿಷಿಯನ್ನು ನೀಡಿರುತ್ತಾರೆ. ಈ ಸಮಜಾಯಿಷಿಯಲ್ಲಿ ವಿಚಾರಣಾ ಬಂದಿ ಸಂಖ್ಯೆ: 1615 ಶ್ರೀ ನಾಗೇಂದ್ರ ರೆಡ್ಡಿ ಈತನನ್ನು ವೈದ್ಯಕೀಯ ಚಿಕಿತ್ಸೆಗಾಗಿ ಬೆಳಗಾವಿ ಜಿಲ್ಲಾ ಆಸ್ಪತ್ರೆಗೆ ಸೂಕ್ತ ಬಂದೋಬಸ್ತ್‌ನೊಂದಿಗೆ ಕಳುಹಿಸಲಾಗಿದ್ದು, ಆಸ್ಪತ್ರೆಯ ವೈದ್ಯಾಧಿಕಾರಿಗಳು ಆತನನ್ನು ಆಸ್ಪತ್ರೆಯ ಜೈಲು ವಾರ್ಡಿಗೆ ದಾಖಲು ಮಾಡಿಕೊಂಡರು, ಜೈಲು ವಾರ್ಡಿಗೆ ದಾಖಲು ಮಾಡಿಕೊಂಡ ನಂತರದಲ್ಲಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯವರು ಸೂಕ್ತ ಬಂದೋಬಸ್ತ್ ಮಾಡಬೇಕಾಗಿರುತ್ತದೆ ಮತ್ತು ಸಂಬಂಧಪಟ್ಟ ಪೊಲೀಸ್ ಅಧಿಕಾರಿಗಳು ಕಾಲಕಾಲಕ್ಕೆ ಸುತ್ತು ಹಾಕಿ ಭದ್ರತಾ ಕ್ರಮಗಳ ನಿಯಮಗಳ ರೀತ್ಯಾ ಕೈಗೊಂಡಿದ್ದಲ್ಲಿ ಬಂದಿಯು, ಆಸ್ಪತ್ರೆ ಜೈಲು ವಾರ್ಡಿನಿಂದ ಪರಾರಿಯಾಗುವುದನ್ನು ತಡೆಯಬಹುದಾಗಿತ್ತೆಂದು ವಿವರಣೆಯನ್ನು ನೀಡಿ ಬಂದಿ ಶ್ರೀ ನಾಗೇಂದ್ರ ರೆಡ್ಡಿ ಈತನು ಆಸ್ಪತ್ರೆಯ ಜೈಲು ವಾರ್ಡಿನಿಂದ ತಪ್ಪಿಸಿಕೊಳ್ಳುವಲ್ಲಿ ಸದರಿಯವರು ಯಾವುದೇ ರೀತಿಯಲ್ಲೂ ಜವಾಬ್ದಾರರಲ್ಲವೆಂದೂ, ಪರಿಣಾಮವಾಗಿ ಅವರು ಯಾವುದೇ ಕರ್ತವ್ಯಲೋಪವನ್ನು ಎಸಗಿರುವುದಿಲ್ಲವೆಂದು ತಿಳಿಸುತ್ತಾ, ಅವರ ವಿರುದ್ಧ ಹೂಡಲು ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ.

ಏತನ್ಮಧ್ಯೆ, ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು, ಬಳ್ಳಾರಿ ಕೇಂದ್ರ ಕಾರಾಗೃಹ, ಬಳ್ಳಾರಿ ಇವರು ದಿನಾಂಕ 31–8–2010ರಂದು ಹಾಗೂ ಶ್ರೀ ಎಂ. ಹೆಚ್. ಕುಂಬಾರ್, ಮುಖ್ಯ ವೀಕ್ಷಕರು, ಬೆಳಗಾಂ ಕೇಂದ್ರ ಕಾರಾಗೃಹ, ಬೆಳಗಾಂ, ಇವರು ದಿನಾಂಕ 30–9–2010ರಂದು ವಯೋನಿವೃತ್ತಿ ಹೊಂದಿದ್ದಾರೆ.

ಈ ಪ್ರಕರಣದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಸರ್ಕಾರಕ್ಕೆ ಕಳುಹಿಸಿದ ವಿಚಾರಣಾ ವರದಿಯನ್ನು ಹಾಗೂ ಆರೋಪಿತ ಅಧಿಕಾರಿ ಶ್ರೀ ಡಿ. ಬಿ. ಕಡ್ಲಿ ಮತ್ತು ಸಿಬ್ಬಂದಿಯಾದ ಶ್ರೀ ಎಂ. ಹೆಚ್. ಕುಂಬಾರ್ ಇವರು ನೀಡಿದ ಸಮಜಾಯಿಷಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 42 ಪಿಆರ್‌ಇ 2009, ಬೆಂಗಳೂರು, ದಿನಾಂಕ : 13–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಡಿ. ಬಿ. ಕಡ್ಲಿ, ಮುಖ್ಯ ಅಧೀಕ್ಷಕರು (ನಿವೃತ್ತ) ಬಳ್ಳಾರಿ ಕೇಂದ್ರ ಕಾರಾಗೃಹ, ಬಳ್ಳಾರಿ ಮತ್ತು ಶ್ರೀ ಎಂ. ಹೆಚ್. ಕುಂಬಾರ್ (ನಿವೃತ್ತ) ಮುಖ್ಯ ವೀಕ್ಷಕರು, ಬಳ್ಳಾರಿ ಕೇಂದ್ರ ಕಾರಾಗೃಹ, ಬಳ್ಳಾರಿ ಇವರ ವಿರುದ್ಧ ಆರಂಭಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1473 ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್. ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರ ಪರಿವೀಕ್ಷಣಾ ಅವಧಿಯನ್ನು ಎರಡನೇ ಅವಧಿಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ.: ಒಇ 453 2009, ದಿನಾಂಕ 10-02-2010

**2.** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ.: ಡಿಪಿಎನ್/ಸಿಶಾ.1/37/2008-09, ದಿನಾಂಕ 22-07-2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 10-02-2010ರ ಸರ್ಕಾರದ ಆದೇಶದಲ್ಲಿ ಶ್ರೀ ಎನ್. ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರ ಪರಿವೀಕ್ಷಣಾವಧಿಯನ್ನು ಮೊದಲಬಾರಿಗೆ ದಿನಾಂಕ 16-05-2008 ರಿಂದ 15-05-2010ರ ವರೆಗೆ ವಿಸ್ತರಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ದಿನಾಂಕ 22-07-2010ರ ಪತ್ರದಲ್ಲಿ ಶ್ರೀ ಎನ್. ಎಸ್. ಮಲ್ಲಯ್ಯ ಇವರ ಮನವಿಯ ಮೇರೆಗೆ ಈ ಹಿಂದೆ ಇವರ ಪರಿವೀಕ್ಷಣಾವಧಿಯನ್ನು ದಿನಾಂಕ 16-05-2008 ರಿಂದ 15-05-2010ರ ವರೆಗೆ ಮೊದಲ ಬಾರಿಗೆ ವಿಸ್ತರಿಸಲಾಗಿದೆ. ಪ್ರಸ್ತುತ, ಸದರಿಯವರು ಜನವರಿ 2010ರ ಮೊದಲನೇ ಅಧಿವೇಶನದ ಪರೀಕ್ಷೆಯಲ್ಲಿ ಜನರಲ್ ಲಾ ಭಾಗ-1 ಪತ್ರಿಕೆ-2ರಲ್ಲಿ ಉತ್ತೀರ್ಣತೆ ಹೊಂದಿರುವುದಿಲ್ಲ ಮನಃ ಪರೀಕ್ಷೆ ಪಡೆಯಲು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವಾದ 30-04-2010ರೊಳಗೆ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದ ಬಗ್ಗೆ ನಿವೇದಿಸಿ ಮುಂದಿನ ಅಧಿವೇಶನದ ಪರೀಕ್ಷೆಯಲ್ಲಿ ಉತ್ತೀರ್ಣತೆಹೊಂದಿ ದಾಖಲೆಯನ್ನು ಸಲ್ಲಿಸುವುದಾಗಿ ವಿನಂತಿಸಿ ಅವರ ಪರಿವೀಕ್ಷಣಾವಧಿಯನ್ನು ಮತ್ತೊಂದು ಅವಧಿಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಆದ್ದರಿಂದ, ಇವರ ಪರಿವೀಕ್ಷಣಾವಧಿಯನ್ನು ದಿನಾಂಕ 16-05-2010 ರಿಂದ 15-05-2011ರ ವರೆಗೆ ಎರಡನೇ ಬಾರಿಗೆ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 261 ಪಿಪಿಇ 2010, ಬೆಂಗಳೂರು, ದಿನಾಂಕ : 30-05-2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀ ಎನ್. ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ. ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)(i) ರಲ್ಲಿನ ಎರಡನೇ ಬಾರಿಗೆ ಒಂದು ವರ್ಷ ಅವಧಿಗೆ ದಿನಾಂಕ 16-05-2010 ರಿಂದ 15-05-2011ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-'ಬಿ')

ಪಿ.ಆರ್. 1474

## ಒಳಾಡಳಿತ ಸಚಿವಾಲಯ

**ವಿಷಯ :** ತನಿಖಾಧಿಕಾರಿಗಳು ನ್ಯಾಯಾಲಯದಲ್ಲಿ ಸಲ್ಲಿಸುವ ದೋಷಾರೋಪಣಾ ಪಟ್ಟಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸುವುದಕ್ಕೆ ಮುಂಚಿತವಾಗಿ ಅಭಿಯೋಜಕರು ಪರಿಶೀಲಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ.: ಲಾ 15 ಪಿಪಿಇ 73, ದಿನಾಂಕ 20-03-1973.

**2.** ಸರ್ಕಾರದ ಆದೇಶ ಸಂಖ್ಯೆ: ಒಇ 428 ಪಿಪಿಇ 2007, ದಿನಾಂಕ 14-12-2007

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ಖಂಡಿಕೆ 4 ರಲ್ಲಿ ತನಿಖಾಧಿಕಾರಿಗಳು ದೋಷಾರೋಪಣಾ ಪಟ್ಟಿಗಳನ್ನು ನ್ಯಾಯಾಲಯದಲ್ಲಿ ಸಲ್ಲಿಸುವುದಕ್ಕೆ ಮುಂಚಿತವಾಗಿ ಸಂಬಂಧಪಟ್ಟ ಅಭಿಯೋಜಕರನ್ನು ಸಂಪರ್ಕಿಸಿ ಸಲಹೆ ಸೂಚನೆಗಳನ್ನು ಪಡೆಯುವುದು ಹಾಗೂ ಸದರಿ ಸಲಹೆ ಸೂಚನೆಗಳನ್ನು ಅಳವಡಿಸಿಕೊಂಡು, ನ್ಯಾಯಾಲಯಕ್ಕೆ ಸಲ್ಲಿಸುವ ಬಗ್ಗೆ ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ತನಿಖಾಧಿಕಾರಿಗಳು ದೋಷಾರೋಪಣಾ ಪಟ್ಟಿಗಳನ್ನು ನ್ಯಾಯಾಲಯದಲ್ಲಿ ಸಲ್ಲಿಸುವುದಕ್ಕೆ ಮುಂಚಿತವಾಗಿ ಸಂಬಂಧಪಟ್ಟ ಅಭಿಯೋಜಕರನ್ನು ಸಂಪರ್ಕಿಸಿ ಸಲಹೆ ಸೂಚನೆಗಳನ್ನು ಪಡೆಯುವುದು ಹಾಗೂ ಸದರಿ ಸಲಹೆ ಸೂಚನೆಗಳನ್ನು ಅಳವಡಿಸಿಕೊಂಡು ಪರಿಷ್ಕೃತ ದೋಷಾರೋಪಣ ಪಟ್ಟಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸುವ ಪದ್ಧತಿಯನ್ನು ಕೂಡಲೇ ರದ್ದುಪಡಿಸಿ, ತನಿಖಾಧಿಕಾರಿಗಳೇ ನೇರವಾಗಿ ದೋಷಾರೋಪಣಾ ಪಟ್ಟಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸುವ ಬಗ್ಗೆ ಆದೇಶಿಸಲಾಗಿದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ಮುಖ್ಯವಾದ ಸದರಿ ತೀರ್ಪನ್ನು ತಿಳಿಸಿದ ನಂತರ ಯಾವುದೇ ಪ್ರಕರಣದ ತನಿಖೆ ಮುಗಿಸಿ, ತನಿಖೆಯ ಅಂತಿಮ ವರದಿ ಸಲ್ಲಿಸುವುದು ಅಂದರೆ ದೋಷಾರೋಪಣಾ ಪಟ್ಟಿ ಸಲ್ಲಿಸುವುದು ಅಥವಾ ನಾಪತ್ತೆ ಪ್ರಕರಣವೆಂದು ಸಿ ವರದಿ ಸಲ್ಲಿಸುವುದು, ಅಥವಾ Mistakes of Facts, lack of Evidence ಎಂದು ಬಿ ವರದಿ ಸಲ್ಲಿಸುವುದೇ ಎಂಬ ನಿರ್ಣಯವನ್ನು ತನಿಖಾಧಿಕಾರಿಗಳು ಮಾತ್ರ ತೆಗೆದುಕೊಳ್ಳುವುದು ಸೂಕ್ತ ಹಾಗೂ ಈ ನಿರ್ಣಯ ಅಭಿಯೋಜಕರು ಅಥವಾ ಕಾನೂನಿನಲ್ಲಿ ಅಧಿಕಾರ ಇಲ್ಲದ ಅಧಿಕಾರಿಗಳು ತೆಗೆದುಕೊಳ್ಳುವುದು ಸಮಂಜಸವಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಈ ಹಿನ್ನೆಲೆಯಲ್ಲಿ ಪೊಲೀಸ್ ಅಧಿಕಾರಿಗಳು ತನಿಖೆ ಮುಗಿಸಿ ಪ್ರಕರಣದ ದೋಷಾರೋಪಣಾ ಪಟ್ಟಿ ಸಲ್ಲಿಸುವುದು ಸೂಕ್ತವೆಂದು ತೀರ್ಮಾನಿಸಿದ ನಂತರ ಆ ಪಟ್ಟಿಯಲ್ಲಿ ಕೆಲವೊಂದು ತಾಂತ್ರಿಕ ವಿಷಯಗಳ ಬಿಟ್ಟು ಹೋಗಿರುವ ಸಾಧ್ಯತೆಗಳು ಉಂಟು ಉದಾಹರಣೆಗೆ ಸರಿಯಾದ ದಾಖಲೆಗಳನ್ನು ಲಗತ್ತಿಸದೆ ಇರುವುದು, ಹೇಳಿಕೆಗಳನ್ನು ಲಗತ್ತಿಸದೆ ಇರುವುದು ಮುಂತಾದ ವಿಷಯಗಳು ತಾಂತ್ರಿಕ ದೋಷಗಳನ್ನು Scrutiny ಮಾಡುವ ಮೂಲಕ ಸರಿಪಡಿಸುವುದು ಅಭಿಯೋಜಕರುಗಳ ಕರ್ತವ್ಯವಾಗಿರುತ್ತದೆ.

ದಿನಾಂಕ 19-03-2011 ಹಾಗೂ 10-05-2011ರಂದು ಮಾನ್ಯ ಗೃಹ ಹಾಗೂ ಸಾರಿಗೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಎಲ್ಲಾ ಹಿರಿಯ ಪೊಲೀಸ್ ಅಧಿಕಾರಿಗಳು Charge Sheet ಗಳ Scrutiny ಅನ್ನು ನಿಲ್ಲಿಸಿರುವುದರಿಂದ ಅದರ ಗುಣಮಟ್ಟ ಇಳಿಮುಖವಾಗಿದ್ದು, ಪ್ರಕರಣಗಳು

ದೋಷಸಿದ್ಧವಾಗುವುದು ಕಡಿಮೆಯಾಗುತ್ತಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಅದಲ್ಲದೆ ದಿನಾಂಕ 07–02–2011 ರಂದು ಮಾನ್ಯ ನಗರಾಭಿವೃದ್ಧಿ, ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು ನಡೆಸಿದ ಸಭೆಯಲ್ಲಿ ಅಡ್ವೋಕೇಟ್ ಜನರಲ್, ರಾಜ್ಯ ಸರ್ಕಾರಿ ಅಭಿಯೋಜಕರು, ಹಿರಿಯ ಪೊಲೀಸ್ ಅಧಿಕಾರಿಗಳು, ಕಾನೂನು ಇಲಾಖೆಯ ಕಾರ್ಯದರ್ಶಿಗಳು, ಅಭಿಯೋಗ ನಿರ್ದೇಶಕರು ಈ ವಿಷಯ ಚರ್ಚೆಗೆ ಬಂದಾಗ ಕ್ರಿಮಿನಲ್ ಪ್ರಕರಣಗಳಲ್ಲಿ ದೋಷಾರೋಪಣ ಪಟ್ಟಿಯನ್ನು Scrutiny ಮಾಡುವುದು ಸೂಕ್ತವಾಗಿರುತ್ತದೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೇಲೆ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 75 ಪಿಪಿಇ 2011, ಬೆಂಗಳೂರು, ದಿನಾಂಕ : 13–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಸರ್ಕಾರದ ಆದೇಶ ಸಂಖ್ಯೆ: ಒಇ 428 ಪಿಪಿಇ 2007, ದಿನಾಂಕ 14–12–2007ನ್ನು ಹಿಂಪಡೆದು, ಈ ಹಿಂದೆ ಜಾರಿಯಲ್ಲಿದ್ದ ಉಲ್ಲೇಖ (1)ರ ಸರ್ಕಾರದ ಆದೇಶ ಸಂಖ್ಯೆ: ಲಾ 15 ಪಿಪಿಇ 73, ದಿನಾಂಕ 20–03–1973ರಲ್ಲಿ ಆದೇಶಿಸಿದಂತೆ ಕ್ರಿಮಿನಲ್ ಪ್ರಕರಣಗಳಲ್ಲಿನ ದೋಷಾರೋಪಣಾ ಪಟ್ಟಿಯನ್ನು ತನಿಖಾಧಿಕಾರಿಗಳು ನ್ಯಾಯಾಲಯಕ್ಕೆ ಸಲ್ಲಿಸುವ ಮುನ್ನ ಸಂಬಂಧಪಟ್ಟ ಅಭಿಯೋಜಕರುಗಳ ಕಾನೂನು ಸಲಹೆಗಳನ್ನು ಪಡೆದು ದೋಷಾರೋಪಣಾ ಪಟ್ಟಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸುವ ಪದ್ಧತಿಯನ್ನು ತಕ್ಷಣವೇ ಜಾರಿಗೆ ಬರುವಂತೆ ಆದೇಶಿಸಿದೆ. ಆದರೆ ದೋಷಾರೋಪಣೆ ಪತ್ರವನ್ನು ಈ ಹಿಂದೆ ಸಂಬಂಧಪಟ್ಟ ಅಭಿಯೋಜಕರ ಮೊಹರು ಮತ್ತು ಸಹಿಯೊಂದಿಗೆ ನ್ಯಾಯಾಲಯಕ್ಕೆ ಸಲ್ಲಿಸುತ್ತಿದ್ದ ಕ್ರಮವನ್ನು ಕೈಬಿಡುವುದು ಸೂಕ್ತವೆಂದು ಆದೇಶಿಸಿದೆ.

ಸಂಬಂಧಪಟ್ಟ ಅಭಿಯೋಜಕರಿಗೆ ವಿವರವಾದ ಸೂಚನೆಗಳನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯ ಇಲಾಖೆ ಇವರು ನೀಡುವಂತೆ ಆದೇಶಿಸಲಾಗಿದೆ ಹಾಗೂ ತನಿಖಾಧಿಕಾರಿಗಳಿಗೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರು ವಿವರವಾದ ಸೂಚನೆಗಳನ್ನು ನೀಡುವಂತೆ ಸಹ ಆದೇಶಿಸಿದೆ. ಈ ಬಗ್ಗೆ ಹೊರಡಿಸಿದ ಸೂಚನೆಗಳ ಪ್ರತಿಗಳನ್ನು ಸರ್ಕಾರಕ್ಕೆ ಮಹಾ ನಿರ್ದೇಶಕರು ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಮತ್ತು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರು ಕಳುಹಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1475 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–'ಬಿ')

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವೆಂಕಟೇಶ್, ವೃತ್ತ ನಿರೀಕ್ಷಕರು, ಗ್ರಾಮಾಂತರ ವೃತ್ತ ಮಂಡ್ಯ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಮೈಸೂರು ನಗರ, ಇವರ ಆದೇಶ ಸಂಖ್ಯೆ: ಶಿಕ್ಷ/211/2008–09 (ಓ.ಬಿ. 29/2009–10) ದಿನಾಂಕ 23–5–2009.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)71/2009–10, ದಿನಾಂಕ 15–02–2010.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 28–5–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)71/2009–10, ದಿನಾಂಕ 08–12–2010.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 31 ಸಿಎನ್‌ಎಸ್ 11, ದಿನಾಂಕ 01–6–2011.

**ಪ್ರಸ್ತಾವನೆ :**

ಶ್ರೀ ವೆಂಕಟೇಶ್, ವೃತ್ತ ನಿರೀಕ್ಷಕರು, ಗ್ರಾಮಾಂತರ ವೃತ್ತ, ಮಂಡ್ಯ ಇವರು ಈ ಹಿಂದೆ ಮೈಸೂರು ನಗರದ ವಿಜಯನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ವೆಂಕಟೇಶ್, ಪೊಲೀಸ್ ನಿರೀಕ್ಷಕರು, ವಿಜಯನಗರ ಠಾಣೆ, ಮೈಸೂರು ನಗರ ಆದ ನಿಮಗೆ ಲೋಕಸಭಾ ಚುನಾವಣೆ ಹಿನ್ನೆಲೆಯಲ್ಲಿ ಠಾಣಾ ವ್ಯಾಪ್ತಿಯಲ್ಲಿ ಬಾರ್ ಮತ್ತು ರೆಸ್ಟೋರೆಂಟ್‌ಗಳನ್ನು ರಾತ್ರಿ ವೇಳೆಯಲ್ಲಿ ನಿಗಧಿತ ಸಮಯಕ್ಕೆ ಮುಚ್ಚಿಸುವಂತೆ ಹಲವಾರು ಬಾರಿ ಸೂಚನೆಗಳನ್ನು ನೀಡಲಾಗಿದೆ. ದಿನಾಂಕ 20–3–2009 ರಂದು ರಾತ್ರಿ 11.30 ಗಂಟೆಯಲ್ಲಿ ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು ವಿಜಯನಗರ ಠಾಣಾ ಸರಹದ್ದಿನ ಪಟೇಲ್ ಡಾಬಾ ತೆರೆದಿರುವ ಬಗ್ಗೆ ಗಮನಿಸಿ ಗಸ್ತಿನ ಅಧಿಕಾರಿಗಳಿಗೆ ಸೂಚಿಸಿ ಮುಚ್ಚಿಸಿರುತ್ತಾರೆ. ನೀವು ಕರ್ತವ್ಯವನ್ನು ಗಂಭೀರವಾಗಿ ಪರಿಗಣಿಸದೆ ಉದಾಸೀನತೆಯಿಂದ ವರ್ತಿಸಿರುವುದರಿಂದ ಜಿಲ್ಲಾ ಚುನಾವಣಾಧಿಕಾರಿಗಳು ಅವಧಿ ಮೀರಿ ತೆರೆದಿರುವ ಬಾರ್ ಮತ್ತು ರೆಸ್ಟೋರೆಂಟ್‌ಗಳನ್ನು ಮುಚ್ಚಿಸಲು ನೀವು ಕಾರಣರಾಗುವ ಮೂಲಕ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಲೋಪವೆಸಗಿರುತ್ತೀರೆಂದು ಈ ದೋಷಾರೋಪಣೆ ಪತ್ರ.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಮೈಸೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 23–5–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಬಾಧಕವಾಗದಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 15–02–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಲು ಸರ್ಕಾರವು ತೀರ್ಮಾನಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 95 ಪೊಸಿಅ 2010, ಬೆಂಗಳೂರು, ದಿನಾಂಕ : 14–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೆಂಕಟೇಶ್, ವೃತ್ತ ನಿರೀಕ್ಷಕರು, ಗ್ರಾಮಾಂತರ ವೃತ್ತ ಮಂಡ್ಯ, ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1476 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಸೃಜನೆಯಾದ ತಾಂತ್ರಿಕೇತರ ವರ್ಗದ ಅಧಿಕಾರಿ/ಸಿಬ್ಬಂದಿ ವರ್ಗದ ಹುದ್ದೆಗಳ ಹಂಚಿಕೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಇಬಿಎಸ್ 2010 ದಿನಾಂಕ: 25–02–2011.
2. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ1/ಇ.ಪು.ವ್ಯ/38929/10–11 ದಿನಾಂಕ 22–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಣಾ ಇಲಾಖೆಗೆ ಹೆಚ್ಚುವರಿ ಸಿಬ್ಬಂದಿಯ ಸೃಜನೆ ಅತ್ಯಂತ ಆವಶ್ಯವೆಂದು ಭಾವಿಸಿ ಅದರಂತೆ 85 ತಾಂತ್ರಿಕೇತರ ಅಧಿಕಾರಿ/ಸಿಬ್ಬಂದಿ ವರ್ಗದವರ ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಈಗಾಗಲೇ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಲಾಗಿರುವ ಆದೇಶದಂತೆ ವಿದ್ಯುತ್ ಪರಿವೀಕ್ಷಣಾಲಯ ಇಲಾಖೆಯ ವಿವಿಧ ಕಛೇರಿಗಳಿಗೆ ಈ 85 ಹುದ್ದೆಗಳನ್ನು ಹಂಚಿಕೆ ಮಾಡಿ ಆದೇಶಿಸುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010, ಬೆಂಗಳೂರು, ದಿನಾಂಕ : 31–05–2011**

ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಈಗಾಗಲೇ ಸೃಜಿಸಲಾಗಿರುವ 85 ತಾಂತ್ರಿಕೇತರ ಅಧಿಕಾರಿ/ಸಿಬ್ಬಂದಿಯ ಹುದ್ದೆಗಳನ್ನು ಈ ಆದೇಶದ ಅನುಬಂಧ–1 ರಲ್ಲಿ ಸೂಚಿಸಿರುವಂತೆ ವಿವಿಧ ಕಛೇರಿಗಳಿಗೆ ಸಂಬಂಧಿಸಿದಂತೆ ಹಂಚಿಕೆಯನ್ನು ಅನುಮೋದಿಸುತ್ತಾ ಮೇಲೆ ಓದಲಾದ ದಿನಾಂಕ 25–02–2011ರ ಸರ್ಕಾರಿ ಆದೇಶದಲ್ಲಿ ಸೂಚಿಸಿರುವ ಷರತ್ತುಗಳನ್ವಯ ಭರ್ತಿ ಮಾಡಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ

## ANNEXURE -1

**Details showing the distribution of additional posts sanctioned vide govt. EN 61 EBS 2010 dated 25-02-2011**

| Sl. No. | Name of the Office | Senior Accounts Officer | Accounts Officer | Legal Officer | Manager | Superintendents | First Division Asst. | Second Division Assts. | Computer Operators | Helpers | Peons | Total No. of Post |
|---|---|---|---|---|---|---|---|---|---|---|---|---|
| 1 | 2 | 3(a) | 3(b) | 3(c) | 3(d) | 3(e) | 3(f) | 3(g) | 3(h) | 3(i) | 3(j) | |
| 1 | Head Office Bangalore | 1 | 2 | 1 | 0 | 1 | 2 | 4 | 3 | 1 | 2 | 17 |
| 2 | DCEI, Bangalore North | 0 | 0 | 0 | 1 | 0 | 1 | 1 | 1 | 0 | 1 | 5 |
| 3 | DCEI, Bangalore South | 0 | 0 | 0 | 1 | 0 | 1 | 1 | 1 | 0 | 1 | 5 |

| | | | | | | | | | | | | |
|---|---|---|---|---|---|---|---|---|---|---|---|---|
| 4 | DCEI, Bangalore East | 0 | 0 | 0 | 1 | 0 | 1 | 1 | 1 | 0 | 1 | 5 |
| 5 | DCEI, Mysore | 0 | 0 | 0 | 1 | 0 | 1 | 0 | 1 | 0 | 0 | 3 |
| 6 | DCEI, Mangalore | 0 | 0 | 0 | 1 | 0 | 1 | 0 | 1 | 0 | 0 | 3 |
| 7 | DECI, Dharwad | 0 | 0 | 0 | 1 | 0 | 1 | 0 | 0 | 0 | 0 | 2 |
| 8 | DCEI, Bellary | 0 | 0 | 0 | 0 | 0 | 1 | 0 | 0 | 0 | 0 | 1 |
| 9 | EI, Davanagere | 0 | 0 | 0 | 0 | 1 | 0 | 1 | 1 | 1 | 0 | 4 |
| 10 | EI, Udupi | 0 | 0 | 0 | 0 | 1 | 0 | 1 | 1 | 1 | 0 | 4 |
| 11 | EI, Shimoga | 0 | 0 | 0 | 0 | 1 | 0 | 1 | 1 | 0 | 0 | 3 |
| 12 | EI, Hassan | 0 | 0 | 0 | 0 | 1 | 0 | 1 | 1 | 0 | 0 | 3 |
| 13 | EI, Belgaum | 0 | 0 | 0 | 0 | 1 | 0 | 1 | 1 | 1 | 0 | 4 |
| 14 | EI, Gulbarga | 0 | 0 | 0 | 0 | 1 | 0 | 1 | 1 | 0 | 0 | 3 |
| 15 | DEI, Ramanagar | 0 | 0 | 0 | 0 | 0 | 1 | 0 | 0 | 0 | 1 | 2 |
| 16 | DEI, Chickmagalore | 0 | 0 | 0 | 0 | 0 | 0 | 1 | 0 | 0 | 0 | 1 |
| 17 | DEI, Mandaya | 0 | 0 | 0 | 0 | 0 | 0 | 1 | 0 | 0 | 1 | 2 |
| 18 | DEI, Chamarajanagar | 0 | 0 | 0 | 0 | 0 | 0 | 1 | 0 | 0 | 1 | 2 |
| 19 | DEI, Madikeri | 0 | 0 | 0 | 0 | 0 | 0 | 1 | 0 | 1 | 0 | 2 |
| 20 | DEI, Gadag | 0 | 0 | 0 | 0 | 0 | 0 | 1 | 0 | 0 | 0 | 1 |
| 21 | DEI, Haveri | 0 | 0 | 0 | 0 | 0 | 0 | 1 | 0 | 0 | 0 | 1 |
| 22 | DEI, Bagalkote | 0 | 0 | 0 | 0 | 0 | 0 | 1 | 0 | 0 | 0 | 1 |
| 23 | DEI, Koppala | 0 | 0 | 0 | 0 | 0 | 0 | 1 | 0 | 1 | 0 | 2 |
| 24 | DEI, Kolar | 0 | 0 | 0 | 0 | 0 | 0 | 0 | 0 | 1 | 0 | 1 |
| 25 | DEI, Chikkaballapur | 0 | 0 | 0 | 0 | 0 | 0 | 1 | 0 | 1 | 0 | 2 |
| 26 | DEI, Tumkur | 0 | 0 | 0 | 0 | 0 | 0 | 0 | 0 | 1 | 0 | 1 |
| 27 | DEI, Raichur | 0 | 0 | 0 | 0 | 0 | 0 | 0 | 0 | 1 | 0 | 1 |
| 28 | DEI, Bijapur | 0 | 0 | 0 | 0 | 0 | 0 | 0 | 0 | 1 | 0 | 1 |
| 29 | DEI, Sirsi | 0 | 0 | 0 | 0 | 0 | 0 | 0 | 0 | 0 | 1 | 1 |
| 30 | DEI, Ghataprabha | 0 | 0 | 0 | 0 | 0 | 0 | 1 | 0 | 0 | 1 | 2 |
| | **Total** | **1** | **2** | **1** | **6** | **7** | **10** | **23** | **14** | **11** | **10** | **85** |

**Note**: The posts of Peons, Computer Operators and Helpers totaling 35, should not be filled up. The services of these posts should be obtained by outsourcing only.

**SUJTHAMMA**
Desk Officer
Energy Department

P.R. 1477

## ಇಂಧನ ಸಚಿವಾಲಯ

**ವಿಷಯ :** ನವೀಕರಿಸಬಹುದಾದ ಮತ್ತು ಅಸಂಪ್ರದಾಯಿಕ ಇಂಧನ ಯೋಜನೆಗಳ ಪ್ರಸ್ತಾವನೆಗಳಲ್ಲಿ 'ನೆಟ್‌ವರ್ತ್' ಲೆಕ್ಕಹಾಕುವಾಗ ಅನುಸರಿಸಬೇಕಾದ ಮಾನದಂಡಗಳ ಕುರಿತು.

**ಪ್ರಸ್ತಾವನೆ :**

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ರಾಜ್ಯದಲ್ಲಿ ಪವನ/ಕಿರುಜಲ/ಸೌರ ವಿದ್ಯುತ್/ಜೈವಿಕ ಇಂಧನ/ಸಹವಿದ್ಯುತ್ ಮುಂತಾದ ನವೀಕರಿಸಬಹುದಾದ ಮತ್ತು ಅಸಂಪ್ರದಾಯಿಕ ಇಂಧನ ಮೂಲಗಳಿಂದ ವಿದ್ಯುತ್ ಉತ್ಪಾದಿಸಲು ಖಾಸಗಿ ಸಂಸ್ಥೆಗಳಿಗೆ ಅನುಮೋದನೆ ನೀಡುತ್ತಿದ್ದು. ಈ ರೀತಿಯ ಅನುಮೋದನೆ ನೀಡುವ ಮುನ್ನ, ಹಲವು ಅಂಶಗಳನ್ನು ಪರಿಶೀಲಿಸಲಾಗುತ್ತಿದೆ. ಅದರಲ್ಲಿ ಮುಖ್ಯವಾಗಿ, ಈ ಖಾಸಗಿ ಸಂಸ್ಥೆಗಳ 'ನೆಟ್‌ವರ್ತ್' (ನಿವ್ವಳ ಸದೃಢತೆ) (Net Worth) ಪರಿಗಣಿಸಲಾಗುತ್ತಿದೆ. ಆದರೆ, ಈ ನೆಟ್‌ವರ್ತ್‌ನ್ನು ಲೆಕ್ಕಹಾಕಲು ಮಾನದಂಡಗಳನ್ನು ನಿಗದಿಪಡಿಸದೇ ಇರುವುದರಿಂದ, ಈ ಕುರಿತು ಖಾಸಗಿ ಸಂಸ್ಥೆಗಳು ಸಲ್ಲಿಸುವ ನೆಟ್‌ವರ್ತ್ ಕುರಿತು ಮಾಹಿತಿಯು ಏಕರೂಪತೆಯಿಂದ (uniform) ಕೂಡಿರುವುದಿಲ್ಲದಿರುವುದರಿಂದ, ಇದನ್ನು ಪರಿಶೀಲಿಸಲು ಮತ್ತು ಲೆಕ್ಕಹಾಕಲು ತೊಡಕಾಗುತ್ತಿರುವುದನ್ನು ಗಮನಿಸಲಾಗುತ್ತಿದೆ. ಆದ್ದರಿಂದ, ನೆಟ್‌ವರ್ತ್ ಲೆಕ್ಕಹಾಕಲು ಒಂದು ಸೂಕ್ತ ಮಾನದಂಡವನ್ನು ಹಾಗೂ ನೆಟ್‌ವರ್ತ್‌ನ್ನು ಲೆಕ್ಕಹಾಕಿ, ಈ ಕುರಿತಂತೆ ಚಾರ್ಟೆಡ್ ಅಕೌಂಟೆಂಟ್‌ನಿಂದ ದೃಢೀಕರಿಸಿದ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ನೀಡುವ ಅವಶ್ಯಕತೆಯನ್ನು ಮನಗಂಡು ಈ ಕೆಳಕಂಡಂತೆ ನಿಗದಿಪಡಿಸಿ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 240 ಎನ್‌ಸಿಇ 2011 ಬೆಂಗಳೂರು, ದಿನಾಂಕ : 30–05–2011**

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ನವೀಕರಿಸಬಹುದಾದ ಮತ್ತು ಅಸಂಪ್ರದಾಯಿಕ ಇಂಧನ ಮೂಲಗಳಿಂದ ವಿದ್ಯುತ್ ಉತ್ಪಾದಿಸುವ ಖಾಸಗಿ ಸಂಸ್ಥೆಗಳ ಅರ್ಜಿಗಳನ್ನು ಸಲ್ಲಿಸುವಾಗ ಆ ಸಂಸ್ಥೆಯ ನೆಟ್‌ವರ್ತ್‌ನ್ನು ಈ ಕೆಳಗಿನಂತೆ ಲೆಕ್ಕಹಾಕುವುದು:–

**Net Worth:-**

**Paid up** – Equity Share Capital

**Add** – Equity Share Premium

**Add** – General Reserves

**Add** – Other free Reserves (to be specified individually by the Chartered Accountant)

**Less** – Statutory Reserves

**Less** – Revaluation Reserves

**Less** – Accumulated Losses

**Less** – Intangible Assets included in the Balance Sheet

**Less** – Miscellaneous Expenditure to the extend not written off

ಮೇಲ್ಕಂಡ ಮಾನದಂಡವನ್ನು ಅಳವಡಿಸಿಕೊಂಡು ಸಂಸ್ಥೆಯ ನೆಟ್‌ವರ್ತ್‌ನ್ನು ಲೆಕ್ಕಹಾಕಿ ಹಾಗೂ ವಾರ್ಷಿಕ ನೆಟ್‌ವರ್ತ್‌ನ್ನು ಈ ಆದೇಶದೊಂದಿಗೆ ಲಗತ್ತಿಸಿರುವ ಪ್ರಮಾಣ ಪತ್ರದ ನಮೂನೆಯಲ್ಲಿ ಚಾರ್ಟೆಡ್ ಅಕೌಂಟೆಂಟ್‌ರವರಿಂದ ಪ್ರಮಾಣೀಕೃತಗೊಳಿಸಿ ನೀಡತಕ್ಕದ್ದು. ಈ ಮಾನದಂಡವನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಅಂತರ್ಜಾಲದಲ್ಲಿ ಪ್ರಕಟಿಸಿ, ಸಂಬಂಧಪಟ್ಟ ಎಲ್ಲರ ಗಮನಕ್ಕೆ ತರಲು ಕ್ರಮ ಜರುಗಿಸುವುದು. ಹಾಗೆಯೇ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವೂ ಸಹ ತನ್ನ ಎಲ್ಲಾ ಡಾಕ್ಯುಮೆಂಟ್, ಟೆಂಡರ್ ಬುಲೆಟಿನ್, ಮುಂತಾದವುಗಳಲ್ಲೂ ಈ ಮಾನದಂಡವನ್ನು ಅಳವಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## CERTIFICATE

### COMPUTATION OF NETWORTH AS BELOW TO BE CERTIFIED BY A CHARTERED ACCOUNTANT
### NET WORTH

I hereby certify that the Net Worth of M/s…………………………………..………….. as on March 31,……………… is Rs………………… crores, detailed as under:

(Figures in Rs. Crores)
FY…………

**PARTICULARS**

**Paid up** – Equity Share Capital

**Add** – Equity Share Premium

**Add** – General Reserves

**Add** – Other free Reserves (to be specified individually by the Chartered Accountant)

**Sub Total**

**Less** – Statutory Reserves

**Less** – Revaluation Reserves

**Less** – Accumulated Losses

**Less** – Intangible Assets included in the Balance Sheet

**Less** – Miscellaneous Expenditure to the extend **not written off**

**Net Worth**

**DEFINITION**

Net Worth shall mean as below:

**Net Worth =**

**Paid up** – Equity Share Capital

**Add** – Equity Share Premium

**Add** – General Reserves

**Add** – Other free Reserves (to be specified individually by the Chartered Accountant)

**Less** – Statutory Reserves

**Less** – Revaluation Reserves

**Less** – Accumulated Losses

**Less** – Intangible Assets included in the Balance Sheet

**Less** – Miscellaneous Expenditure to the extend **not written off**

ಪಿ.ಆರ್. 1478

## INFRASTRUCTURE DEVELOPMENT SECRETARIAT

**Sub:** Construction of Bangalore – Hassan new railway line.

**Read :** 1. G.O. No. IDD 35 NSW 09 dated 24-04-2009.

**2.** Letter No. W63/CN/BNC/MR/B/GL dated 31-03-2011, from Chief Engineer/CON/EAST/SWR, Bangalore.

**Preamble:**

Railways are one of the most convenient and widely used means of travel in India and also a very critical component in the logistics. The use of rail network for freight and passenger transport has the potential to reduce road congestion, improve safety, improve economic efficiencies and reduce environmental impacts. To increase the rail density in the State, the State Government had taken initiatives to take up rail projects on cost sharing basis (50:50, 2/3$^{rd}$ and 1/3$^{rd}$ etc.,) since 2002. Keeping in view the facts that the allocations for railways has to be increased for early commissioning of railway projects, the State Government has decided to undertake some of the ongoing railway projects in the state, also on cost sharing basis.

2. Accordingly in Government Order read at (1) above, Government of Karnataka, the issues had been examined in the Cabinet and decided to take up the balance work of Bangalore – Hassan new railway project on (50:50 cost sharing between Gok and Railway) w.e.f. 1-4-2010 onwards. The Chief Administrative Office, SWR, Bangalore has provided following information's:-

1. Total Revised estimated cost of the projects as on 31-3-2010, Rs. 928.40 Cr.
2. Total expenditure incurred by the Railway till 31-3-2010, Rs. 355.50 Cr.
3. Estimated cost of the balance work w.e.f. 01-04-2010, Rs. 572.90 Cr.
4. Railway's share of the balance work i.e. from 01-04-2010 (50:50 basis) Rs. 286.45 Cr.
5. State Government share of the balance work i.e. from 01-04-2010 (50:50 basis) Rs. 286.45. Cr.

3. The Chief Engineer, South Western Railway, Bangalore in his letter read at Sl. No. (2) above, has requested to release an amount of Rs. 40.00 crore towards construction of Bangalore – Hassan new railway line.

4. The proposal of Railways has been examined and it has been decided to release an amount of Rs. 40.00 crore (Rupees Forty crore only) out of the budget of Rs. 256.52 crore provided under the Head of Account "5465-01-190-3-05 (Plan) 211 investment" towards cost sharing for new railway projects during 2011-12.

5. Hence this order.

**GOVERNMENT ORDER NO. IDD 30 NSW 2011, BANGALORE DATED 27-05-2011**

After careful examination of the request of Railways, Government is pleased to undertake the balance project work of Construction of Bangalore – Hassan new railway line on 50:50 cost sharing basis and to release an amount of Rs.40.00 crore (Rupees Forty Crore only) being the part of the share of GoK.

2. The expenditure shall be met under the Head of Account "5465-01-190-3-05" (Plan) 211 investment out of the budget provision Rs. 256.52 crore, towards cost sharing for new railway projects during 2011-12.

3. The Railway Department should furnish the amount expended to the project and work completed or the utilization statement before seeking the next release.

4. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government. Infrastructure Development Department and K-RIDE shall in turn deposit the same with the Financial Adivsor and Chief Accounts Officer (Construction), South Western Railway, Bangalore.

5. This order is issued in accordance with the concurrence of Finance Department given vide U.O. Note No. FD 840 Exp-1/2010 dated 18-05-2011.

By Order and in the name of the Governor of Karnataka

**C.A. Baburavindranath Patel**

Under Secretary to Government,

Infrastructure Development Department.

P.R. 1479

**ಒಳಾಡಳಿತ ಸಚಿವಾಲಯ**

**ವಿಷಯ :** ಆಂಧ್ರ ಪ್ರದೇಶ ರಾಜ್ಯದ ಹೈದರಾಬಾದ್ ನಗರದ ಕಾನೂನು ಮತ್ತು ಸುವ್ಯವಸ್ಥೆ ಬಂದೋಬಸ್ತ್ ಕರ್ತವ್ಯಕ್ಕೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ 10 ಕಂಪನಿಗಳನ್ನು ನಿಯೋಜಿಸಿರುವ ಬಗ್ಗೆ ಘಟನೋತ್ತರ ಮಂಜೂರಾತಿ ಕುರಿತು.

**ಓದಲಾಗಿದೆ :** ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರ ಪತ್ರ ಸಂಖ್ಯೆ: ಡಿಪ್ಲಾಯ್/21/ಹೆಚ್–ಎಲ್ ಮತ್ತು ಒ/2010–11, ದಿನಾಂಕ 04–05–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರು ರವರು ತಮ್ಮ ಪ್ರಸ್ತಾವನೆಯಲ್ಲಿ ಆಂಧ್ರ ಪ್ರದೇಶ ರಾಜ್ಯದ ಹೈದರಾಬಾದ್ ನಗರದ ಕಾನೂನು ಮತ್ತು ಸುವ್ಯವಸ್ಥೆ ಬಂದೋಬಸ್ತ್ ಕರ್ತವ್ಯಕ್ಕೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ ಹತ್ತು (10) ಕಂಪನಿಗಳನ್ನು ದಿನಾಂಕ 03–01–2011 ರಿಂದ 21–03–2011ರವರೆಗೆ ನಿಯೋಜಿಸಿದ್ದಕ್ಕೆ ಸಂಬಂಧಿಸಿದಂತೆ ಸರ್ಕಾರದಿಂದ ಘಟನೋತ್ತರ ಅನುಮೋದನೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 574 ಎಸ್‌ಎಸ್‌ಟಿ 2010, ಬೆಂಗಳೂರು, ದಿನಾಂಕ : 21–05–2011**

ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರು ತಮ್ಮ ಪ್ರಸ್ತಾವನೆಯಲ್ಲಿ ಆಂಧ್ರ ಪ್ರದೇಶ ರಾಜ್ಯದ ಹೈದರಾಬಾದ್ ನಗರದ ಕಾನೂನು ಮತ್ತು ಸುವ್ಯವಸ್ಥೆ ಬಂದೋಬಸ್ತ್ ಕರ್ತವ್ಯಕ್ಕೆ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು, ಕೆ.ಎಸ್.ಆರ್.ಪಿ., ಬೆಂಗಳೂರುರವರ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ ಐದು (05) ಕಂಪನಿಗಳನ್ನು ನಿಯೋಜಿಸಿ ಹೊರಡಿಸಿದ್ದ ಆದೇಶ ಸಂಖ್ಯೆ: 21/ಡಿಪ್ಲಾಯ್/ಹೆಚ್–ಎಲ್ ಮತ್ತು ಒ/2010–11, ದಿನಾಂಕ 03–01–2011ಕ್ಕೆ ಸರ್ಕಾರವು ತನ್ನ ಘಟನೋತ್ತರ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1480

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಮಾನ್ಯ ಮುಖ್ಯ ಮಂತ್ರಿಯವರ ಕಾರ್ಯಾಲಯದಲ್ಲಿ ವೇತನ ಶ್ರೇಣಿ ರಹಿತ ಒಂದು ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/3325/2010, ದಿನಾಂಕ: 29–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 29–10–2010 ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಪತ್ರಿಕಾ ಕಾರ್ಯದರ್ಶಿಯವರ ಕಾರ್ಯಾಲಯದಲ್ಲಿ ಖಾಲಿ ಇರುವ ವಾರ್ತಾಧಿಕಾರಿ ಹುದ್ದೆಗೆ ಶ್ರೀ ಕೆ.ಬಿ. ಮೇರುನಂದನ್, ಅಬಕಾರಿ ಅಧೀಕ್ಷಕರು, ಇವರನ್ನು ದಿನಾಂಕ: 28–10–2010 ರಿಂದ ಜಾರಿಗೆ ಬರುವಂತೆ ನೇಮಿಸಲು ಕೋರಲಾಗಿದೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 557 ಸಅಸೇ 2010, ಬೆಂಗಳೂರು, ದಿನಾಂಕ : 30–05–2011**

ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ದಿನಾಂಕ: 28–10–2010 ರಿಂದ ಜಾರಿಗೆ ಬರುವಂತೆ ಹಾಗೂ ಮಾನ್ಯ ಮುಖ್ಯ ಮಂತ್ರಿಯವರ ಪಧಾವಧಿಯವರೆಗೂ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 399 ವೆಚ್ಚ–12/2011, ದಿನಾಂಕ: 04–05–2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 1481

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ: 22–11–2001.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 11 ಸೇನೌವ 2010, ದಿನಾಂಕ: 13–05–2010.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2011, ದಿನಾಂಕ: 27–04–2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 22–11–2001ರ ಸರ್ಕಾರಿ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತ ಮಾರ್ಗಸೂಚಿಗಳನ್ನು ನೀಡಲಾಗಿದ್ದು, ಈ ಮಾರ್ಗಸೂಚಿಗಳ ಪ್ರಕಾರ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಮಾತ್ರ ಕೆಲವು ಷರತ್ತಿಗೊಳಪಟ್ಟು ಮಾಡಬಹುದಾಗಿದೆ. ಮೇಲೆ ಉಲ್ಲೇಖಿಸಲಾದ ದಿನಾಂಕ 13–05–2010ರ ಸರ್ಕಾರಿ ಆದೇಶದಲ್ಲಿ 2010–11ನೇ ಸಾಲಿಗೆ ಸಂಬಂಧಿಸಿದಂತೆ ಕೆಲವು ಮಾರ್ಪಾಟುಗಳನ್ನು ಮಾಡಿ ಈ ಮಾರ್ಗಸೂಚಿಗಳನ್ನು ಅನುಸರಿಸಲು ತೀರ್ಮಾನಿಸಲಾಗಿತ್ತು. ಅದರಂತೆ, 2011–12ನೇ ಸಾಲಿನಲ್ಲಿ ದಿನಾಂಕ 13–05–2010ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ, ದಿನಾಂಕ 22–11–2001ರ ಮಾರ್ಗಸೂಚಿಗಳನ್ನೇ ಅನುಸರಿಸಲು ತೀರ್ಮಾನಿಸಿ, ಮೇಲೆ ಓದಲಾದ ದಿನಾಂಕ 27–04–2011ರ ಸರ್ಕಾರಿ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿರುತ್ತದೆ. ಈ ಆದೇಶದನ್ವಯ, ವರ್ಗಾವಣೆ ಪ್ರಕ್ರಿಯೆಗಳನ್ನು ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸುಗಳ ಮೇಲೆ ದಿನಾಂಕ 31–05–2011ರ ಅವಧಿಯೊಳಗೆ ಮಾಡತಕ್ಕದ್ದೆಂದು ಆದೇಶಿಸಲಾಗಿರುತ್ತದೆ. ಈ ಅವಧಿಯ ನಂತರ ಯಾವುದೇ ವರ್ಗಾವಣೆ ಮಾಡಬೇಕಾದಲ್ಲಿ ಅದಕ್ಕೆ ಮಾನ್ಯ ಮುಖ್ಯಮಂತ್ರಿಯವರ ಪೂರ್ವಾನುಮೋದನೆಯನ್ನು ಪಡೆದು ಮಾಡತಕ್ಕದ್ದೆಂದೂ ಸಹ ಆದೇಶಿಸಲಾಗಿರುತ್ತದೆ. ದಿನಾಂಕ 02–06–2011ರಿಂದ ವಿಧಾನ ಮಂಡಲದ ಅಧಿವೇಶನ ನಡೆಯಲಿರುವುದರಿಂದ ಅನೇಕ ಇಲಾಖೆಗಳಲ್ಲಿ ಸಾಮಾನ್ಯ ವರ್ಗಾವಣೆ ಮಾಡಲು ಸಾಧ್ಯವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ವರ್ಗಾವಣೆ ಅವಧಿಯನ್ನು ಮತ್ತೆ ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 12 ಸೇನೌವ 2011, ಬೆಂಗಳೂರು, ದಿನಾಂಕ : 31–05–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ, ಮೇಲೆ ಕ್ರಮಾಂಕ 3ರಲ್ಲಿ ಓದಲಾದ ದಿನಾಂಕ 27–04–2011ರ ಸರ್ಕಾರಿ ಆದೇಶದಲ್ಲಿ ನಮೂದಿಸಿದ ಷರತ್ತುಗಳೊಂದಿಗೆ ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ: 30–06–2011ರ ವರೆಗೆ ಮಾಡಬಹುದೆಂದು ಆದೇಶಿಸಲಾಗಿದೆ. ಆದರೆ, ದಿನಾಂಕ 02–06–2011ರಿಂದ ನಡೆಯಲಿರುವ ವಿಧಾನ ಮಂಡಲದ ಅಧಿವೇಶನದ ಅವಧಿಯಲ್ಲಿ ಯಾವುದೇ ವರ್ಗಾವಣೆಗಳನ್ನು ಮಾಡಬಾರದೆಂದೂ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–I)

ಪಿ.ಆರ್. 1482

## PERSONAL AND ADMINISTRATIVE REFORMS SECRETARIAT

**Sub:** Deputation of IAS officers for the 5th round of Phase III Mid-career Training Programme-Reg.

**Read :**
1. D.O. letter No. 2/3/2011-Trg-IV, dated 15-03-2011 from Director, LBSNAA, Mussoorie.
2. Government Order of even number dated 10-06-2011.

**GOVERNMENT ORDER NO. DPAR 48 SIS 2011, BANGALORE, DATED : 14-06-2011**

In continuation of Government Order of even No. dated: 10-06-2011 regarding deputation of following IAS officers belonging to 2001 and 2002 batches of Karnataka cadre for the 5th round of Phase III Mid-career Training Programme to be held from 20-06-2011 to 12-08-2011 at Lal Bahadur Shastri National Academy for Administration, Mussoorie, the Government has made the following incharge arrangements during the period of training.

| Sl. No. | Name of the officer and designation Sriyuths | In-charge to be held by |
|---|---|---|
| 1 | Dr. Ekroop Caur, IAS, (KN:01)<br>Deputy Commissioner, Belgaum District, Belgaum. | Dr. M.N. Ajay Nagabhushan, IAS<br>Joint Commissioner of Commercial Taxes (Intelligence) Club Road, Belgaum. |
| 2 | Dr. J. Ravishankar, IAS, (KN:01)<br>Director, Karnataka Rural Water Supply and Sanitary Agency and E/o Joint Secretary to Government, RDPR Department, Bangalore, Cauvery Bhavan. | Director, RDPR Department, Bangalore. |
| 3 | Sri.Darpan Jain, IAS<br>Deputy Commissioner, Dharwad District, Dharwad. | Additional Deputy Commissioner, Dharwad District, Dharwad. |

| | | |
|---|---|---|
| 4 | Imkongla Jamir, IAS, (KN:02)<br>Additional Resident Commissioner Karnataka Bhavan, No. 10, Kautilya Marg, Chanakyapuri, New Delhi. | Deputy Resident Commissioner Karnataka Bhavan, No. 10, Kautilya Marg, Chanakyapuri, New Delhi. |
| 5 | D.S. Vishwanath, IAS, (KN:02)<br>Secretary, Karnataka Public Service Commission, Bangalore. | Sri. V.B. Patil, IAS<br>Director of Agriculture Marketing, Bangalore. |

By Order and in the name of the Governor of Karnataka

**N.Srinivasa Murthy**

P.R. 1483

Under Secretary to Government,
DP & AR (Services – 1)

## ವಸತಿ ಸಚಿವಾಲಯ

**ವಿಷಯ :** ಮುಂಡರಗಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1999, ದಿನಾಂಕ: 10-05-2000.

2. ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್/2008, ದಿನಾಂಕ: 16-09-2009.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಮುಂಡರಗಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 116 ಹೆಚ್ಎಎಸ್ 2010(ಭಾ), ಬೆಂಗಳೂರು, ದಿನಾಂಕ : 23ನೇ ಮೇ 2011**

ಮುಂಡರಗಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಶಿವಪ್ಪ ಫ. ನವಲಗುಂದ | ಸಾಮಾನ್ಯ |
| 2 | ಶ್ರೀ ಶ್ರೀನಿವಾಸ ವಿ. ಕಟ್ಟಿಮನಿ | ಪರಿಶಿಷ್ಟ ಜಾತಿ |
| 3 | ಶ್ರೀ ರಾಜೇಸಾಬ ಮ. ತಪ್ಪಡಿ | ಅಲ್ಪಸಂಖ್ಯಾತರು |
| 4 | ಶ್ರೀಮತಿ ಗೀತಾ ಯ. ಕುಕನೂರ | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಆರ್. ವಲ್ಲೂರ**

ಪಿ.ಆರ್. 1484

ಪೀಠಾಧಿಕಾರಿ-2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ವಿಧಾನಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1999, ದಿನಾಂಕ: 10-05-2000.

2. ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್/2008, ದಿನಾಂಕ: 16-09-2009.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬೆಂಗಳೂರು ದಕ್ಷಿಣ ವಿಧಾನಸಭಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 229 ಹೆಚ್ಎಎಸ್ 2010, ಬೆಂಗಳೂರು, ದಿನಾಂಕ : 23ನೇ ಮೇ 2011**

ಬೆಂಗಳೂರು ದಕ್ಷಿಣ ವಿಧಾನಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಟಿ. ಪುಟ್ಟಸ್ವಾಮಿ ಬಿನ್ ಲೇಟ್ ಶ್ರೀ ಟಿ. ತಿಮ್ಮಯ್ಯ,<br>ನಂ. 118, 3ನೇ ಅಡ್ಡರಸ್ತೆ, ದೊಡ್ಡಕಲ್ಲಸಂದ್ರ, ಕನಪುರ ರಸ್ತೆ, ಬೆಂಗಳೂರು-62 | ಸಾಮಾನ್ಯ |
| 2 | ಶ್ರೀ ಎಸ್. ಮುನಿರಾಜು ಬಿನ್ ಶ್ರೀ ಸಂಪಂಗಪ್ಪ,<br>ನಂ. 8, ನಾಗನಾಥಪುರ, ರಾಯಸಂದ್ರ ರಸ್ತೆ, ಎಲೆಕ್ಟ್ರಾನಿಕ್ ಪೋಸ್ಟ, ಬೇಗೂರು ಹೋಬಳಿ, ಬೆಂಗಳೂರು | ಹಿಂದುಳಿದ ವರ್ಗ |

| | | |
|---|---|---|
| 3 | ಶ್ರೀ ಕೆ. ಕಿಶೋರ್ ಕುಮಾರ್ ಕೆ.ಬಿನ್. ಶ್ರೀ ಕುಂದನ್‌ಮಾಲ್, ನಂ. 34–14/2, ಕೆನರಾ ಬ್ಯಾಂಕ್ ಕಾಲೋನಿ, ಉತ್ತರಹಳ್ಳಿ ಮುಖ್ಯರಸ್ತೆ, ಬೆಂಗಳೂರು–61 | ಅಲ್ಪಸಂಖ್ಯಾತರು |
| 4 | ಶ್ರೀಮತಿ ಜಯಲಕ್ಷ್ಮೀ ಕೋಂ ಶ್ರೀ ಜಿ.ಪಿ. ಸಂಪಂಗಿ, ನಂ. 14/6, ಆರ್.ಕೆ. ಬಡಾವಣೆ, ಶಂಕರ್‌ನಾಗ್ ರಸ್ತೆ, ಗೊಟ್ಟಿಗೆರೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–83. | ಸಾಮಾನ್ಯ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಆರ್. ವಲ್ಲೂರ**

ಪಿ.ಆರ್. 1485 ಪೀಠಾಧಿಕಾರಿ–2, ವಸತಿ ಇಲಾಖೆ

## HORTICULTURE SECRETARIAT

**Sub:** "Central Sector Scheme for Drip Irrigation" –Release of funds – reg..

**Read :** 1. G.O. No. HCD 71 HPP 2011 dated 31-03-2011.

2. Director of Horticulture letter No. ತೋಇ/ತೋಜಂನಿ/ಹನೀ/ಸತೋಅ–1/44 2010–11 dated 12-05-2011.

**PREAMBLE:**

The scheme for "Central Sector Scheme for Drip Irrigation" Head of Account 2401-00-108-2-30 has been continued during 2011-12 as an ongoing scheme with an outlay of Rs. 5000.00 lakhs as per Government Order read at (1) above. Further, an amount of Rs. 992.11 lakhs has been provided under district sector for this scheme.

2. The Director of Horticulture in his letter read at (2) above has informed that during 2010-11 an amount of Rs. 1841.00 lakhs was the matching State share balance amount under the scheme for "Central Sector Scheme for Drip Irrigation" Head of Account 2401-00-108-2-30-059. Further, the Director of Horticulture has requested to release the balance of Rs. 1841.00 lakhs during 2011-12 towards matching State share for the funds released from Government of India during 2010-11.

3. The request of the Director of Horticulture has been examined and hence this order.

**GOVERNMENT ORDER NO. HCD 121 HPP 2011, BANGALORE, DATED : 31-05-2011**

Government is pleased to release to the Director of Horticulture an amount of Rs. 1250.00 lakhs (Rupees One Thousand Two Hundred and Fifty lakhs Only) (out of the balance of Rs. 1841.00 lakhs for the year 2010-11) during 2011-12 towards the State share for "Central Sector Scheme for Drip Irrigation" under the Head of Account 2401-00-108-2-30-059 as matching State share for the funds already released from Government of India during 2010-11.

2. This order issues with the concurrence of Internal Financial Advisor, Agriculture, Horticulture and Animal Husbandry Department vide its Note No. ತೋಇ 15 ಆಂಆಸ 2011 dated 25-05-2011.

By Order and in the name of the Governor of Karnataka

**B.C. Prakash**

P.R. 1486 Under Secretary to Government,

Horticulture Department

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2010–11ನೇ ಸಾಲಿನ ಮುಂಗಾರು ಋತುವಿನಲ್ಲಿ ಬೇಸಿಗೆ ಭತ್ತವನ್ನು ರೈತರಿಂದ ಕನಿಷ್ಟ ಬೆಂಬಲ ಬೆಲೆ ಯೋಜನೆ ಅಡಿಯಲ್ಲಿ ಭತ್ತವನ್ನು ಖರೀದಿಸುವ ಕುರಿತು.

**ಓದಲಾಗಿದೆ :** ಕೇಂದ್ರ ಸರ್ಕಾರದ ಆಹಾರ ಮಂತ್ರಾಲಯದ ಪತ್ರ ಸಂ : 5(21)/2009–ಕಜ.ಖ, ದಿನಾಂಕ : 6–6–2011.

**ಪ್ರಸ್ತಾವನೆ :**

ರಾಜ್ಯದ ನೀರಾವರಿ ಸೌಲಭ್ಯವಿರುವ ಪ್ರದೇಶಗಳಲ್ಲಿ ಬೆಳೆದ ಬೇಸಿಗೆ ಭತ್ತದ ಇಳುವರಿಯು ಮಾರುಕಟ್ಟೆಗೆ ಆವಕವಾಗುತ್ತಿರುವ ಹಿನ್ನೆಲೆಯಲ್ಲಿ ಭತ್ತದ ಬೆಲೆಯು ಕುಸಿದಿರುವುದರಿಂದ ರೈತರ ಹಿತಾಸಕ್ತಿಯನ್ನು ಕಾಪಾಡಲು ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಭತ್ತವನ್ನು ಖರೀದಿಸಲು ಕೇಂದ್ರ ಸರ್ಕಾರದ ಅನುಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಪತ್ರದಲ್ಲಿ ಕೇಂದ್ರ ಸರ್ಕಾರವು ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಭತ್ತವನ್ನು ರೈತರಿಂದ ಖರೀದಿಸಲು 2010–11ರ ಮುಂಗಾರು ಋತುವಿನ ಅವಧಿಯನ್ನು ದಿನಾಂಕ : 31–8–2011ರವರೆಗೆ ವಿಸ್ತರಿಸಿ ಅನುಮತಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 20 ಆರ್‌ಪಿಆರ್ 2011, ಬೆಂಗಳೂರು, ದಿನಾಂಕ : 9–6–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೇಸಿಗೆ ಭತ್ತವನ್ನು ಬೆಳೆದಿರುವ ಜಿಲ್ಲೆಗಳಿಂದ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು 2010–11ನೇ ಸಾಲಿನಲ್ಲಿ ನಿಗದಿಪಡಿಸಿರುವ ದರಗಳನ್ವಯ ರೈತರಿಂದ ಖರೀದಿಸಲು ಅನುಮತಿಯನ್ನು ನೀಡಿದೆ.

2010–11ನೇ ಸಾಲಿನಲ್ಲಿ ಸರ್ಕಾರಿ ಆದೇಶ ಸಂ : ಆನಾಸ 20 ಆರ್‌ಪಿಆರ್ 2010, ದಿನಾಂಕ : 31–10–2010ರ ಆದೇಶದಲ್ಲಿ ಜಿಲ್ಲಾವಾರು ಹಂಚಿಕೆ ಮಾಡಿರುವಂತೆಯೇ ಸಂಗ್ರಹಣಾ ಕಾರ್ಯವನ್ನು ನಿರ್ವಹಿಸತಕ್ಕದ್ದು. ಇನ್ನುಳಿದಂತೆ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಸೋಮಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1487 ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## SOCIAL WELFARE SECRETARIAT

## CIRCULAR

**No. SWD 179 SAD 2010, Bangalore, dated 14th June, 2011.**

**Sub :** Preventing non-SC/STs from availing the benefits meant for SC/ST-clarification reg.

**Ref :** 1. G.O. No. SWD 713 SAD 1993, dt. 11-3-2002.

2. G.O. No. SWD 127 SAD 2002, dt. 29-3-2003.

**Preamble:**

The Government vide order at (1) above had ordered that the persons belonging to "Parivara, Talawara, Maaleru, Kuruba, Besta and Koli" communities who have obtained Scheduled Tribe Certificate claiming as "Nayaka, Maaleru, Kadu kuruba, Jenu kuruba, Gond, Rajgond, Kolidhor, Tokrekoli", shall surrender such certificates to the issuing authority for cancellation and those persons shall not be liable for penal action provided they surrender the certificate.

The Government vide order read at (2) above extended the benefit of G.O. at (1) above to the persons who belongs to "Kote Kshatriya, Kotegara, Koteyava, Kottegara, Koteyara, Rama Kshatriya, Serugara and Servegara" castes who obtained SC certificate claiming as "Kotegara, Metri" with same condition of surrendering of such certificates.

However, it has come to the notice of the Govt. that some persons are obtaining the false Caste Certificates in the name of SC/ST and also trying to seek the protection under the above said G.O. even after 11-3-2002. Besides, some of the persons as explained above have not surrendered their certificates even now as per G.O. dated 11-3-2002. This matter has also came for discussion before the State Level Vigilance Committee meeting held on 27-9-2010 and it is directed by the said Committee to prevent such misuse of benefits meant for SC/STs and withdraw G.O. etc. Further, the benefit of G.O. dated 11-3-2002 is also being availed by the persons who were/ are appointed in Central Govt.

Therefore, the following clarifications are given with regard to the above said G.O. dated 11-3-2002 with instructions that the concerned officers shall take necessary action against those persons who obtained the false certificates even after 11-3-2002 and also those who have not surrendered the certificates.

(1) The persons belongs to the communities listed in para 1 & 2 of this circular based on circular at ref (1 & 2), who have obtained SC/ST certificates prior to 11-3-2002 are only eligible for the benefits under G.O. dated 11-3-2002 subject to, surrendering the certificate to the issuing authority for cancellation. it is clarified that in case the above said persons who have not surrendered the SC/ST certificates, the benefit of G.O. dated 11-3-2002 shall not be extended to them and they should be removed from service etc. and are liable for criminal action.

(2) The benefit of G.O. dated 11-3-2002 cannot be extended to the persons belonging to the communities listed in para 1 & 2 of this circular based on circulars at ref (1 & 2), who obtained such certificates after 11-3-2002 and such persons are liable for criminal action.

(3) The benefit of G.O. at ref. (1 & 2) should not be extended to the persons belonging to other communities except those mentioned in the above said G.Os, who have obtained false SC/ST certificates either before or after dated : 11-3-2002.

(4) The benefit of G.O. at ref. No. 1 & 2, is not applicable to the employees/officers of Central Govt., i.e., Govt. of India and its agencies.

By Order and in the name of the Governor of Karnataka,

**A.M. CHIDANANDA SWAMY**

P.R. No. 1488 Under Secretary to Government-1,

Social Welfare Department.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಮಾದರಿ ಸಾರ್ವಜನಿಕ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಕಇ 133 ಪಕವಿ 2010, ದಿನಾಂಕ : 29–6–2010.

**2.** ಸರ್ಕಾರಿ ಆದೇಶ ಸಂಖ್ಯೆ : ಸಕಇ 133 ಪಕವಿ 2010, ದಿನಾಂಕ : 12–11–2010.

ಪ್ರಸ್ತಾವನೆ :

2011–12ನೇ ಸಾಲಿನ ಆಯವ್ಯಯ (ಸಾಮಾನ್ಯ) ಭಾಷಣದಲ್ಲಿ ಕಂಡಿಕೆ 122 ಈ ಕೆಳಗಿನಂತಿದೆ :–

"2010–11ನೇ ಸಾಲಿನಲ್ಲಿ 11 ಜಿಲ್ಲೆಗಳಲ್ಲಿ 11 ಮಾದರಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲಾಯಿತು. ಉಳಿದ 19 ಜಿಲ್ಲೆಗಳಲ್ಲಿ ಇನ್ನೂ 19 ಮಾದರಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ. ಇದಕ್ಕಾಗಿ ರೂ. 38.00 ಕೋಟಿಗಳನ್ನು ಒದಗಿಸಲಾಗುವುದು".

ಮೇಲೆ ಓದಲಾದ ದಿನಾಂಕ : 29–6–2010ರ ಸರ್ಕಾರಿ ಆದೇಶದಲ್ಲಿ ರಾಜ್ಯದ ಆರು ಜಿಲ್ಲೆಗಳಲ್ಲಿ (ರಾಯಚೂರು, ಕೊಪ್ಪಳ, ಬಿಜಾಪುರ, ಗದಗ, ಚಿತ್ರದುರ್ಗ ಮತ್ತು ಕೋಲಾರ) 2010–11ನೇ ಸಾಲಿನಲ್ಲಿ ತಲಾ ಒಂದೊಂದು ಬಾಲಕರ ಮೆಟ್ರಿಕ್ ನಂತರದ ಮಾದರಿ ವಿದ್ಯಾರ್ಥಿ ನಿಲಯ ಮತ್ತು ನಾಲ್ಕು ಜಿಲ್ಲೆಗಳಲ್ಲಿ (ಯಾದಗಿರಿ, ಚಾಮರಾಜನಗರ, ಬಾಗಲಕೋಟೆ ಮತ್ತು ಚಿಕ್ಕಬಳ್ಳಾಪುರ) ತಲಾ ಒಂದೊಂದು ಬಾಲಕಿಯರ ಮೆಟ್ರಿಕ್ ನಂತರದ ಮಾದರಿ ವಿದ್ಯಾರ್ಥಿ ನಿಲಯ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆಗೆ ಒಂದು ಮೆಟ್ರಿಕ್ ನಂತರದ ಬಾಲಕರ ಮಾದರಿ ಸಾರ್ವಜನಿಕ ವಿದ್ಯಾರ್ಥಿ ನಿಲಯ ಮಂಜೂರು ಮಾಡಲಾಗಿತ್ತು.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 133 ಪಕವಿ 2011, ಬೆಂಗಳೂರು, ದಿನಾಂಕ : 07–06–2011**

2011–12ನೇ ಸಾಲಿನಲ್ಲಿ ನೆಲಮಂಗಲ (ಬೆಂಗಳೂರು ಗ್ರಾಮಾಂತರ ಜಿಲ್ಲೆ), ದಾವಣಗೆರೆ, ಬೀದರ್, ಚಿಕ್ಕಮಗಳೂರು, ಮಂಗಳೂರು, ಮಂಡ್ಯ ಈ ಸ್ಥಳಗಳಲ್ಲಿ ಒಂದೊಂದು ಬಾಲಕಿಯರ ಮೆಟ್ರಿಕ್ ನಂತರದ ಮಾದರಿ ವಿದ್ಯಾರ್ಥಿನಿಲಯ ಹಾಗೂ ಬೆಂಗಳೂರು ನಗರ, ರಾಮನಗರ, ತುಮಕೂರು, ಹಾವೇರಿ, ಧಾರವಾಡ, ಬೆಳಗಾವಿ, ಗುಲ್ಬರ್ಗಾ, ಬಳ್ಳಾರಿ, ಕಾರವಾರ, ಉಡುಪಿ, ಹಾಸನ, ಮೈಸೂರು, ಮಡಿಕೇರಿ ಇಲ್ಲಿ ಒಂದೊಂದು ಬಾಲಕರ ಮೆಟ್ರಿಕ್ ನಂತರದ ಮಾದರಿ ವಿದ್ಯಾರ್ಥಿನಿಲಯ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಅಂತಹ ವಿದ್ಯಾರ್ಥಿನಿಲಯಗಳಲ್ಲಿ ಈ ಕೆಳಗಿನಂತೆ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ.

| ಕ್ರ. ಸಂ. | ಹುದ್ದೆ ಪದನಾಮ | ಹುದ್ದೆಗಳ ಸಂಖ್ಯೆ (ಪ್ರತಿ ವಿದ್ಯಾರ್ಥಿ ನಿಲಯಕ್ಕೆ) | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|
| 1. | ನಿಲಯಪಾಲಕರು | 01 | 19 |
| 2. | ಅಡುಗೆಯವರು | 02 | 38 |
| 3. | ಅಡುಗೆ ಸಹಾಯಕರು | 02 | 38 |
| 4. | ರಾತ್ರಿ ಕಾವಲುಗಾರರು (ವಿದ್ಯಾರ್ಥಿನಿಯರ ವಿದ್ಯಾರ್ಥಿ ನಿಲಯಗಳಿಗೆ ಮಾತ್ರ) | 01 | 6 |
| | ಒಟ್ಟು | 06 | 101 |

ಷರತ್ತುಗಳು :

(1) ಗ್ರೂಪ್–ಡಿ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ತುಂಬತಕ್ಕದ್ದು.

(2) ಪ್ರತಿ ವಿದ್ಯಾರ್ಥಿನಿಲಯದ ನಿಲಯಾರ್ಥಿಗಳ ಸಂಖ್ಯಾಬಲ 100 ಆಗಿದ್ದು ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ನೀಡತಕ್ಕದ್ದು.

(3) ಉಳಿದಂತೆ ಸರ್ಕಾರಿ ಆದೇಶ ಸಂಖ್ಯೆ : ಸಕಇ 133 ಪಕವಿ 2010 ದಿನಾಂಕ : 29–6–2010 ಮತ್ತು 7–12–2010 ರಲ್ಲಿನ ಉಪಬಂಧಗಳು ಯಥಾವತ್ತಾಗಿ ಅನ್ವಯಿಸುತ್ತವೆ.

ಆ ಸಂಬಂಧದ ವೆಚ್ಚವನ್ನು 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2225–03–800–0–19 (ಯೋಜನೆ) ಅಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆ ಸಹಮತಿಯನ್ನು ಟಿಪ್ಪಣಿ ಸಂಖ್ಯೆ : ಆಇ 186 ವೆಚ್ಚ–3/11, ದಿನಾಂಕ : 17–5–2011 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಪಿ.ಆರ್. 1489 ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸಿ. ಚಂದ್ರಯ್ಯ ನಿವೃತ್ತ ಉಪ ಕಾರ್ಯದರ್ಶಿ ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** 1) ನೋಟೀಸ್ ಸಂಖ್ಯೆ : ಸಿಆಸುಇ 19 ಸೇಇವಿ 2010, ದಿನಾಂಕ : 18–10–2010.

2) ಆರೋಪಿತ ಅಧಿಕಾರಿಯವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ : 26–3–2011.

**ಪ್ರಸ್ತಾವನೆ :**

ಶ್ರೀ ಸಿ. ಚಂದ್ರಯ್ಯ, ನಿವೃತ್ತ ಉಪಕಾರ್ಯದರ್ಶಿ ಇವರು ಈ ಹಿಂದೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ 12ನೇ ಹಣಕಾಸು ಆಯೋಗದ ಸಹಾಯಧನದ ಅಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ವಿಷಯಕ್ಕೆ ಸಂಬಂಧಪಟ್ಟಂತೆ ಕಡತ ಸಂಖ್ಯೆ : ಸಿಆಸುಇ 31 ಅಸಪ 2009, ದಿನಾಂಕ : 22–1–2010ರ ಆದೇಶದ ಸರ್ಕಾರದ ವಿವಿಧ ಇಲಾಖೆಗಳ/ಕಛೇರಿಗಳಿಗೆ 12ನೇ ಹಣಕಾಸು ಆಯೋಗದ ಸಹಾಯಧನದ ಅಡಿಯಲ್ಲಿ 2009–10ನೇ ಸಾಲಿನಲ್ಲಿ ಕಛೇರಿ ಆಧುನೀಕರಣಕ್ಕಾಗಿ ಒಟ್ಟು ರೂ. 1,89,08,000–00ಗಳ ಅನುದಾನವನ್ನು ಮಂಜೂರು ಮಾಡಿದ್ದು, ಸದರಿ ಆದೇಶದ ಪುಟ ಸಂಖ್ಯೆ 4 ಕ್ರಮ ಸಂಖ್ಯೆ 4 ರಲ್ಲಿ ಪ್ರಧಾನ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು–ಇವರಿಗೆ ಇಲಾಖೆಯ ಕಾರ್ಯ ಯೋಜನೆ ಹಾಗೂ ತರಬೇತಿ ಕೇಂದ್ರಗಳಿಗೆ ಸರ್ವೆ ಉಪಕರಣಗಳ ಖರೀದಿ ಬಗ್ಗೆ "Electronic Digital total Station with std accessories make SOKKIA, Model : SET510 & KPS11PT Single tilting range pole prism with the accessories for the above said Total Station (3 prism for each Digital Station). ಒಟ್ಟು ರೂ. 66,58,000–00ಗಳನ್ನು ಮಂಜೂರು ಮಾಡಲಾಗಿದೆ. ಈ ಸರ್ಕಾರದ ಆದೇಶದ ಪ್ರತಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ)ಯವರ ಕಛೇರಿಯಲ್ಲಿ ದಿನಾಂಕ : 25–1–2010 ರಂದು ಸ್ವೀಕರಿಸಲಾಗಿದೆ. ಅದಲ್ಲದೇ, ಇದೇ ಆದೇಶದ ಇನ್ನೊಂದು ಪ್ರತಿ ದಿನಾಂಕ : 9–2–2010ರಂದು ಸ್ವೀಕರಿಸಲಾಗಿದೆ

ಎಂದು ವರದಿ ಮಾಡುತ್ತಾ, ದಿನಾಂಕ : 25–1–2010 ರಂದು ಸ್ವೀಕೃತವಾದ ಮೂಲ ಪ್ರತಿಯಲ್ಲಿ ಸರ್ವೆ ಉಪಕರಣಗಳನ್ನು ಮೆ. ಎನ್‌ಟೆಕ್ ಡಿಸಿಮ್ಯಾಪ್ ಸಿಸ್ಟಮ್ಸ್, ಬೆಂಗಳೂರು ಇವರಿಂದಲೇ ಖರೀದಿಸಬೇಕೆಂದು ನಿರ್ದೇಶಿಸಲಾಗಿದೆ. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ : 9–2–2010 ರಂದು ಸ್ವೀಕರಿಸಲಾದ ಮೂಲ ಪ್ರತಿಯಲ್ಲಿ ಮೆ. ಎನ್‌ಟೆಕ್ ಡಿಸಿಮ್ಯಾಪ್ ಸಿಸ್ಟಮ್ಸ್, ಬೆಂಗಳೂರು ಸಂಸ್ಥೆಯಿಂದಲೇ ಖರೀದಿಸಬೇಕೆಂಬ ಬಗ್ಗೆ ಪ್ರಸ್ತಾಪವಿರುವುದಿಲ್ಲ. ಸರ್ಕಾರದ ದಿನಾಂಕ : 22–1–2010ರ ಆದೇಶದ ಎರಡೂ ಮೂಲ ಪ್ರತಿಗಳನ್ನು ಗಮನಿಸಲಾಗಿ/ಪರಿಶೀಲಿಸಲಾಗಿ ಆದೇಶದ 4ನೇ ಪುಟದ ಕ್ರಮ ಸಂಖ್ಯೆ 4 ರಲ್ಲಿ ಅರಣ್ಯ ಇಲಾಖೆಗೆ ಸಂಬಂಧಿಸಿದಂತೆ ಸಂಸ್ಥೆಯ ಹೆಸರನ್ನು ಹೆಚ್ಚಿಗೆ ಸೇರಿಸಿ, ನಮೂದಿಸಿ ವ್ಯತ್ಯಾಸವನ್ನುಂಟು ಮಾಡಿ ದಿನಾಂಕ : 22–1–2010ರ ಸರ್ಕಾರದ ಆದೇಶವನ್ನು ದುರುದ್ದೇಶದಿಂದ ದುರ್ಲಾಭ ಪಡೆಯಲು ತಿದ್ದುಪಡಿ ಮಾಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಈ ಘಟನೆಯಲ್ಲಿ ಅಧಿಕಾರಿಯವರು ಭಾಗಿಯಾಗಿರಬಹುದೆಂದು ಕಂಡುಬಂದಿದ್ದರಿಂದ ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್‌ನಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು.

ಆರೋಪಿತ ನಿವೃತ್ತ ಅಧಿಕಾರಿ ಶ್ರೀ ಸಿ. ಚಂದ್ರಯ್ಯ ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಮನವಿಯಲ್ಲಿ ತಮ್ಮ ವಿರುದ್ಧ ಹೊರಿಸಲಾದ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಸದರಿ ಲಿಖಿತ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 19 ಸೇಇವಿ 2010, ಬೆಂಗಳೂರು, ದಿನಾಂಕ :6ನೇ ಜೂನ್ 2011.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11–'ಎ' ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿ. ಚಂದ್ರಯ್ಯ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಕೆ. ರಾಧಾಕೃಷ್ಣ ಹೊಳ್ಳ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(5) (ಸಿ)ರ ಅನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜಕೀಯ ವಿಶ್ರಾಂತಿ ವೇತನ–2) ಅವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ. ( ಸೇವೆಗಳು–3)

ಪಿ.ಆರ್. 1490

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ ಅವರ ವಿರುದ್ಧದ ಇಲಾಖಾ ವಿಚಾರಣೆ– ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1) ನೋಟೀಸ್ ಸಂಖ್ಯೆ : ಸಿಆಸುಇ 8 ಎಸ್‌ಇಎನ್ 2003, ದಿನಾಂಕ : 5–2–2004.
2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 8 ಎಸ್‌ಇಎನ್ 2003, ದಿನಾಂಕ : 15–3–2008.
3) ವಿಚಾರಣಾಧಿಕಾರಿ ಹಾಗೂ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ : 28–3–2011.

**ಪ್ರಸ್ತಾವನೆ :**

ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಈ ಹಿಂದೆ ನಗರಾಭಿವೃದ್ಧಿ ಇಲಾಖೆಯಲ್ಲಿ ಶಾಖಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದಾಗ, ಬೆಂಗಳೂರು ನಗರದ ಸುತ್ತಮುತ್ತಲಿನ 7 ನಗರ ಸಭೆಗಳಿಗೆ ಅಧಿಭಾರ ಶುಲ್ಕ ಬಿಡುಗಡೆ ಮಾಡುವ ವಿಚಾರದಲ್ಲಿ ತಪ್ಪು ಮಾಹಿತಿಯನ್ನು ನೀಡಿ ಮೇಲಾಧಿಕಾರಿಗಳಿಂದ ಕಡತ ಅನುಮೋದಿಸಿಕೊಂಡು ಆದೇಶವನ್ನು ಹೊರಡಿಸಲು ಕಾರಣರಾಗುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಲು ಕಾರಣರಾಗಿದ್ದಾರೆ ಎಂಬ ಆರೋಪಕ್ಕೆ ಸಂಬಂಧಿಸಿದಂತೆ ನಗರಾಭಿವೃದ್ಧಿ ಇಲಾಖೆಯಿಂದ ಸ್ವೀಕೃತವಾದ ಪ್ರಸ್ತಾವನೆಯನ್ವಯ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ನೋಟೀಸ್ ಜಾರಿ ಮಾಡಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು ನೋಟೀಸ್‌ಗೆ ಅಧಿಕಾರಿಯು ದಿನಾಂಕ : 9–6–2004 ರಲ್ಲಿ ಸಲ್ಲಿಸಿದ್ದ ವಿವರಣೆಯನ್ನು ಪರಿಶೀಲಿಸಿ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 15–3–2008 ರ ಆದೇಶದಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (3) ರಲ್ಲಿ ಓದಲಾದ ದಿನಾಂಕ : 28–3–2011ರ ಪತ್ರದೊಂದಿಗೆ ಅಂತಿಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯಲ್ಲಿ ಪ್ರಕರಣದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಪ್ರಕರಣದಲ್ಲಿ ಅಂತಿಮ ನಿರ್ಧಾರವು ಉನ್ನತ ಮಟ್ಟದಲ್ಲಿ ತೆಗೆದುಕೊಂಡಿರುವುದು ಕಂಡು ಬರುತ್ತದೆಯೇ ಹೊರತು ಶಾಖಾಧಿಕಾರಿ ಮಟ್ಟದಲ್ಲಿ ತೆಗೆದುಕೊಂಡಿರುವುದಿಲ್ಲ. ಆದ್ದರಿಂದ ಶ್ರೀ ಎಸ್.ಆರ್. ಹಿರೇಮಠ, ಶಾಖಾಧಿಕಾರಿ ಇವರೊಬ್ಬರನ್ನೇ ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲವೆಂದು ಹಾಗೂ ಇದೇ ವಿಷಯದ ಪ್ರಕರಣ ಲೋಕಾಯುಕ್ತದಲ್ಲಿ ಬಾಕಿಯಿರುವುದು ಕಂಡುಬಂದಿದ್ದು ಆರೋಪಿತ ಅಧಿಕಾರಿಯು ಯಾವುದೇ ದುರುದ್ದೇಶದಿಂದ ನಡೆದುಕೊಂಡಿರುವುದಾಗಲೀ, ಅಥವಾ

ಶಾಮೀಲಾಗಿರುವುದು ಮೇಲ್ನೋಟಕ್ಕೆ ಕಂಡುಬರದಿರುವುದರಿಂದ ಲೋಕಾಯುಕ್ತ ಅಂತಿಮ ವಿಚಾರಣೆಯ ನಂತರ ಈ ಬಗ್ಗೆ ಸೂಕ್ತ ನಿರ್ಧಾರ ತೆಗೆದುಕೊಳ್ಳಬಹುದಾಗಿದೆ" ಎಂದು ಅಭಿಪ್ರಾಯ ನೀಡಿದ್ದಾರೆ. ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ ಅವರ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ವಿಚಾರಣೆ ಮತ್ತು ತತ್ಸಂಬಂಧ ವಾಸ್ತವಾಂಶಗಳನ್ನು ಪರಿಶೀಲಿಸಿದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 8 ಎಸ್ಇಎನ್ 2003, ಬೆಂಗಳೂರು, ದಿನಾಂಕ : 15ನೇ ಜೂನ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧ ದಿನಾಂಕ : 5–2–2004ರ ನೋಟೀಸ್‌ನಲ್ಲಿ ಮಾಡಲಾದ ದೋಷಾರೋಪಣೆಗಳಿಂದ ಅಧಿಕಾರಿಯನ್ನು ದೋಷಮುಕ್ತರನ್ನಾಗಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1491 ಸಿ.ಆ.ಸು. ಇಲಾಖೆ.( ಸೇವೆಗಳು–3).

## ಇಂಧನ ಸಚಿವಾಲಯ

**ವಿಷಯ :** ಮೆ: ಹಾಸನ್ ಥರ್ಮಲ್ ಪವರ್ (ಪ್ರೈವೇಟ್) ಲಿಮಿಟೆಡ್ ರವರ ಕಲ್ಲಿದ್ದಲು ಆಧಾರಿತ 500 ಮೆಗಾ ವ್ಯಾಟ್ ಸಾಮರ್ಥ್ಯದ ಯೋಜನೆಯ ವಿದ್ಯುತ್ ಖರೀದಿ ಒಪ್ಪಂದ–ಕುರಿತು.

**ಓದಲಾಗಿದೆ :**
1) ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್‌ರವರ ಪತ್ರ ಸಂಖ್ಯೆ : ಪಿಸಿಕೆಎಲ್/ಎ14/114/2005–06/6085, ದಿನಾಂಕ : 21–2–2011.
2) ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್ ರವರ ಪತ್ರ ಸಂಖ್ಯೆ : ಪಿಸಿಕೆಎಲ್/ಎ14/114/2005–06/544, ದಿನಾಂಕ : 4–5–2011.

**ಪ್ರಸ್ತಾವನೆ :**

ಭಾರತ ಸರ್ಕಾರದ ವಿದ್ಯುತ್ ಮಂತ್ರಾಲಯವು ಅನುಮೋದಿಸಿದ ಮಾದರಿ ವಿದ್ಯುತ್ ಖರೀದಿ ಒಡಂಬಡಿಕೆಯ ಆಧಾರದ ಮೇಲೆ ಮತ್ತು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗವು ನಿಗದಿಗೊಳಿಸಲಿರುವ ದರ ಹಾಗೂ ಕೇಂದ್ರಿಯ ವಿದ್ಯುತ್ ನಿಯಂತ್ರಣ ಆಯೋಗದ 2009 ರ ಸೂತ್ರದನ್ವಯ ಮೆ: ಹಾಸನ್ ಥರ್ಮಲ್ ಪವರ್ (ಪ್ರೈವೇಟ್) ಲಿಮಿಟೆಡ್ ರವರ 500 ಮೆಗಾ ವ್ಯಾಟ್ ಸಾಮರ್ಥ್ಯದ ಕಲ್ಲಿದ್ದಲು ಆಧಾರಿತ ವಿದ್ಯುತ್ ಯೋಜನೆಯ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಪರಿಷ್ಕರಿಸಲಾಗಿದೆ ಎಂದು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್ ರವರು ತಿಳಿಸಿರುತ್ತಾರೆ.

ದಿನಾಂಕ 7–9–2010 ರಂದು ಪರಿಷ್ಕೃತ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಅನುಮೋದನೆಗಾಗಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಸಲ್ಲಿಸಿದ್ದು, ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದವರು ಪತ್ರ ದಿನಾಂಕ: 12–11–2010 ರಲ್ಲಿ ಸದರಿ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ (ಖಿಜಡಿಟ & ಅಠಟಿಜಟಿಣಠಟಿ ಠಜ ಉಜಟಿಜಡಿಚಿಣಠಟಿ ಖಿಜಿಡಿಜಿಜಿ) ವಿನಿಮಯ 2009 ರ ಪ್ರಕಾರ ಪರಿಷ್ಕರಿಸಿ ಒಪ್ಪಂದಕ್ಕೆ ಎರಡೂ ಕಡೆಯವರ ಸಹಿಯೊಂದಿಗೆ ಮರು ಸಲ್ಲಿಸುವಂತೆ ಸೂಚಿಸಿರುತ್ತಾರೆ, ಮೆ: ಹಾಸನ್ ಥರ್ಮಲ್ ಪವರ್ (ಪ್ರೈವೇಟ್) ಲಿಮಿಟೆಡ್‌ರವರು ಕರಡು ಂಟಜಟಿಜಟಜಟಿಣ ಚಿಟಿಜ ಡಿಥಣಚಿಣಜಜ ಕಅತಿಜಡಿ ಕಣಾಡಿಛಿಛಿಚಿಜ ಂಡಿಜಜಟಜಟಿಣ (ಂಖಕಕಂ) ನ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿರುತ್ತಾರೆಂದು ತಿಳಿಸುತ್ತಾ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದೊಂದಿಗೆ ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್ ರವರು ಕರಡು ಂಟಜಟಿಜಟಜಟಿಣ ಚಿಟಿಜ ಡಿಥಣಚಿಣಜಜ ಕಅತಿಜಡಿ ಕಣಾಡಿಛಿಛಿಚಿಜ ಂಡಿಜಜಟಜಟಿಣ (ಂಖಕಕಂ) ಅನ್ನು ಸಲ್ಲಿಸಿ, ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಅನುಮೋದನೆಗೆ ಇದನ್ನು ಸಲ್ಲಿಸುವ ಮುನ್ನ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಮೆ: ಹಾಸನ್ ಥರ್ಮಲ್ ಪವರ್ (ಪ್ರೈವೇಟ್) ಲಿಮಿಟೆಡ್ ರವರ ಕಲ್ಲಿದ್ದಲು ಆಧಾರಿತ 500 ಮೆಗಾವ್ಯಾಟ್ ಸಾಮರ್ಥ್ಯದ ವಿದ್ಯುತ್ ಯೋಜನೆಯ ಅವಶ್ಯಕತೆ ಹಾಗೂ ಈ ಯೋಜನೆಯಿಂದ ಉತ್ಪಾದಿಸುವ ವಿದ್ಯುತ್‌ಗೆ ಯೂನಿಟ್ ಒಂದರ ಸಂಭಾವ್ಯ ದರ ಹಾಗೂ ಇನ್ನಿತರ ಅಂಶಗಳ ಬಗ್ಗೆ ಪರಿಶೀಲಿಸಲು ಸರ್ಕಾರದ ಮಟ್ಟದಲ್ಲಿ ಸಮಿತಿಯೊಂದನ್ನು ರಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 14 ಪಿಪಿಸಿ 2011, ಬೆಂಗಳೂರು, ದಿನಾಂಕ : 14–6–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ: ಹಾಸನ್ ಥರ್ಮಲ್ ಪವರ್ (ಪ್ರೈವೇಟ್) ಲಿಮಿಟೆಡ್ ರವರ ಪ್ರಸ್ತಾಪಿತ ಕಲ್ಲಿದ್ದಲು ಆಧಾರಿತ ಶಾಖೋತ್ಪನ್ನ ವಿದ್ಯುತ್ ಯೋಜನೆಗೆ ಸಂಬಂಧಿಸಿದಂತೆ ಎಲ್ಲಾ ಅಂಶಗಳ ಬಗ್ಗೆ ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | | |
|---|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | – | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಇಂಧನ ಇಲಾಖೆ | – | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ | – | ಸದಸ್ಯರು |
| 4. | ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು | – | ಸದಸ್ಯರು |
| 5. | ಡಾ: ಕೆ.ವಿ. ರಾಜು, ಮಾನ್ಯ ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು | – | ಸದಸ್ಯರು |

6. ವ್ಯವಸ್ಥಾಪಕ ನಿರ್ದೇಶಕರು, – ಸದಸ್ಯರು
ಕರ್ನಾಟಕ ವಿದ್ಯುತ್ ನಿಗಮ ನಿಯಮಿತ
7. ವ್ಯವಸ್ಥಾಪಕ ನಿರ್ದೇಶಕರು, – ಸದಸ್ಯರು
ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
8. ವ್ಯವಸ್ಥಾಪಕ ನಿರ್ದೇಶಕರು, – ಸದಸ್ಯ ಕಾರ್ಯದರ್ಶಿ
ಪವರ್ ಕಂಪನಿ ಆಫ್ ಕರ್ನಾಟಕ ನಿಯಮಿತ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1492 ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** M/s Gulbarga Bio Energy Pvt. Ltd., ಇವರಿಗೆ 2.00 ಮೆಗಾ ವ್ಯಾಟ್ ಸಮರ್ಥ್ಯದ ಬಗಡನಾಳು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ಬಗಡನಾಳು/2007/1826 ದಿನಾಂಕ : 24-04-2007/16-08-2007.
2. ದಿನಾಂಕ : 13-02-2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. ಸರ್ಕಾರದ ಪತ್ರ ಸಂಖ್ಯೆ ಇಎನ್ 284 ಎನ್‌ಸಿಇ 2007 ದಿನಾಂಕ : 24-03-2009.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಬಗ್ಗಡನಾಲು/ಎಂಹೆಚ್‌ಎಸ್/2009/3407 ದಿನಾಂಕ : 20/22-10-2009.
5. ದಿನಾಂಕ : 23-02-2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
6. ಸರ್ಕಾರದ ಪತ್ರ ಸಂಖ್ಯೆ ಇಎನ್ 284 ಎನ್‌ಸಿಇ 2007 ದಿನಾಂಕ : 07-12-2009.
7. ದಿನಾಂಕ : 25-01-2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
8. ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಅಪಜೀ 95 ಎಫ್‌ಎಲ್‌ಎಲ್ 2011 ದಿನಾಂಕ : 10-06-2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Gulbarga Bio Energy Pvt. Ltd. (M/s Tulsi Energy Company Pvt. Ltd. ಎಂಬ ಹೆಸರಿನಲ್ಲಿ ಸಲ್ಲಿಸಿದ್ದ ಅರ್ಜಿಯನ್ನು M/s Gulbarga Bio Energy Pvt. Ltd. ಹೆಸರಿನಲ್ಲಿ ಹಂಚಿಕೆ ಮಾಡಬೇಕೆಂದು ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ಪತ್ರದಲ್ಲಿ ತಿಳಿಸಲಾಗಿದೆ) ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಬಗಡನಾಳು ಗ್ರಾಮದ ಬಳಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಗಡನಾಳು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

> "In this case M/s Tulsi Energy Company Pvt. Ltd. had applied for allotment of 2 MW on the Tungabhadra River near Bagadanalu village, Honnali Taluk, Davanagere District. Even before the project was allotted M/s Tulsi Energy Company Pvt. Ltd. have requested to transfer the same to M/s Gulbarga Bio Energy Pvt. Ltd., Allotment committee was of the opinion that the application of M/s Tulsi Energy Company Pvt. Ltd. should be returned to KREDL. KREDL in turn can process a fresh allotment on behalf of M/s Gulbarga Bio Energy Pvt. Ltd. which is a different legal entity. The application is returned to KREDL".

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ಮೂಲ ಪ್ರಸ್ತಾವನೆಯನ್ನು ಕ್ರೆಡಲ್‌ಗೆ ಹಿಂತಿರುಗಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Gulbarga Bio Energy Pvt. Ltd. ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಬಗಡನಾಳು ಗ್ರಾಮದ ಬಳಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಗಡನಾಳು ಕಿರು ಜಲ ವಿದ್ಯುತ್ ಯೋಜನೆಯನ್ನು ಆದೇಶವಾದ ನಂತರ ಪರಿಷ್ಕೃತ ಶುಲ್ಕವನ್ನು ಭರಣ ಮಾಡುವ ಷರತ್ತಿಗೊಳಪಟ್ಟು ಮಂಜೂರಾತಿ ಮಾಡುವಂತೆ ಕೋರಿ ಸರ್ಕಾರಕ್ಕೆ ಮನಃ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

> "The Company has applied for a 2 MW Mini Hydel Scheme across Tungabhadra River near Bagadanalu village, Honnali Taluk, Davanagere District. The Company has sought for change of name to M/s Gulbarga Bio Energy Pvt. Ltd. The committee recommended that the proposal in the name of M/s Gulbarga Bio Energy Pvt. Ltd. can be studied and placed in the next allotment meeting".

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಮೇಲಿನ ನಿರ್ಣಯದ ಹಿನ್ನೆಲೆಯಲ್ಲಿ ಅಗತ್ಯ ಕ್ರಮ ಕೈಗೊಂಡು ಮುಂದಿನ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಪುನರ್ ಮಂಡಿಸುವಂತೆ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಸದರಿ ಪ್ರಸ್ತಾವನೆಯನ್ನು ಅನುಮೋದಿಸಲಾಗಿರುತ್ತದೆ. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

The Allotment Committee has examined the proposal and after detailed deliberations approved the proposal of M/s Gulbarga Bio Energy Pvt. Ltd. in the name of "Bagadanalu MHS" across, Tungabhadra River, near Bagadanalu village, Honnali Taluk, Davanagere District for 2 MW at the Geo physical reference of Weir Latitude 14$^0$22'30", Longitude 75$^0$37'48" and Power House Latitude 14$^0$22"45", Longitude 75 37' 50",. ಪ್ರಸ್ತುತ ಬಗಡನಾಳು ಗ್ರಾಮವು ದಾವಣಗೆರೆ ಜಿಲ್ಲೆಯ, ಹೊನ್ನಾಳಿ ತಾಲ್ಲೂಕಿನ ಬದಲು ಹರಿಹರ ತಾಲ್ಲೂಕಿನ, ಮಲೆಬೆನ್ನೂರು ಹೋಬಳಿಯ ವ್ಯಾಪ್ತಿಗೆ ಬರುತ್ತದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲಿನ ಬಗಡನಾಳು ಗ್ರಾಮವು ಪಶ್ಚಿಮ ಘಟ್ಟದ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ತಿಳಿಸಿದ್ದರ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 284 ಎನ್‌ಸಿಇ 2007, ಬೆಂಗಳೂರು, ದಿನಾಂಕ: 13–06–2011**

M/s Gulbarga Bio Energy Pvt. Ltd. ಇವರಿಗೆ ದಾವಣಗೆರೆ ಜಿಲ್ಲೆಯ, ಹರಿಹರ ತಾಲ್ಲೂಕಿನ, ಮಲೆಬೆನ್ನೂರು ಹೋಬಳಿಯ, ಬಗಡನಾಳು ಗ್ರಾಮದ ಬಳಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಗಡನಾಳು ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude 14$^0$22'30", Longitude 75$^0$37'48" and Power House Latitude 14$^0$22"45", Longitude 75 37' 50",) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :-

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು, ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00 ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3, ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ /ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿಆರ್.ನಂ. 1493

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** M/s Gulbarga Bio Energy Pvt. Ltd., ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋವಿನಹಾಳು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ಗೋವಿನಹಾಳು/2007/1830 ದಿನಾಂಕ : 17–05–2007/16–08–2007.
2. ದಿನಾಂಕ : 13–02–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. ಸರ್ಕಾರದ ಪತ್ರ ಸಂಖ್ಯೆ ಇಎನ್ 282 ಎನ್‌ಸಿಇ 2007 ದಿನಾಂಕ : 16–03–2009.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಗೋವಿನಹಾಳು/ಎಂಹೆಚ್‌ಎಸ್/2009/3409 ದಿನಾಂಕ : 20/22–10–2009.
5. ದಿನಾಂಕ : 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
6. ಸರ್ಕಾರದ ಪತ್ರ ಸಂಖ್ಯೆ ಇಎನ್ 282 ಎನ್‌ಸಿಇ 2007 ದಿನಾಂಕ : 05–12–2009.
7. ದಿನಾಂಕ : 25–01–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
8. ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಅಪಜೀ 95 ಎಫ್‌ಎಲ್‌ಎಲ್ 2011 ದಿನಾಂಕ : 10–06–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Gulbarga Bio Energy Pvt. Ltd. (M/s Tulsi Energy Company Pvt. Ltd. ಎಂಬ ಹೆಸರಿನಲ್ಲಿ ಸಲ್ಲಿಸಿದ್ದ ಅರ್ಜಿಯನ್ನು M/s Gulbarga Bio Energy Pvt. Ltd. ಹೆಸರಿನಲ್ಲಿ ಹಂಚಿಕೆ ಮಾಡಬೇಕೆಂದು ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ಪತ್ರದಲ್ಲಿ ತಿಳಿಸಲಾಗಿದೆ) ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಗೋವಿನಹಾಳು ಗ್ರಾಮದ ಬಳಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋವಿನಹಾಳು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

> "In this case M/s Tulsi Energy Company Pvt. Ltd. had applied for allotment of 2 MW on the Tungabhadra River near Govinahalu village, Honnali Taluk, Davanagere District. Even before the project was allotted M/s Tulsi Energy Company Pvt. Ltd. have requested to transfer the same to M/s Gulbarga Bio Energy Pvt. Ltd., Allotment committee was of the opinion that the application of M/s Tulsi Energy Company Pvt. Ltd. should be returned to KREDL. KREDL in turn can process a fresh allotment on behalf of M/s Gulbarga Bio Energy Pvt. Ltd. which is a different legal entity. The application is returned to KREDL".

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ಮೂಲ ಪ್ರಸ್ತಾವನೆಯನ್ನು ಕ್ರೆಡಲ್‌ಗೆ ಹಿಂತಿರುಗಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Gulbarga Bio Energy Pvt. Ltd. ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಗೋವಿನಹಾಳು ಗ್ರಾಮದ ಬಳಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋವಿನಹಾಳು ಕಿರು ಜಲ ವಿದ್ಯುತ್ ಯೋಜನೆಯನ್ನು ಆದೇಶವಾದ ನಂತರ ಪರಿಷ್ಕೃತ ಶುಲ್ಕವನ್ನು ಭರಣ ಮಾಡುವ ಷರತ್ತಿಗೊಳಪಟ್ಟು ಮಂಜೂರಾತಿ ಮಾಡುವಂತೆ ಕೋರಿ ಸರ್ಕಾರಕ್ಕೆ ಪುನಃ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

" M/s Tulsi Company Pvt. Ltd has applied for 2 MW project on Tungabhadra River near Govinahalu village. The Company has sought for change of name to M/s Gulbarga Bio Energy Pvt. Ltd. The committee recommended that the proposal in the name of M/s Gulbarga Bio Energy Pvt. Ltd. can be studied and placed in the next Allotment Committee Meeting".

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಮೇಲಿನ ನಿರ್ಣಯದ ಹಿನ್ನೆಲೆಯಲ್ಲಿ ಅಗತ್ಯ ಕ್ರಮ ತೆಗೆದುಕೊಳ್ಳುವಂತೆ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಸದರಿ ಪ್ರಸ್ತಾವನೆಯನ್ನು ಅನುಮೋದಿಸಲಾಗಿರುತ್ತದೆ. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

In the Allotment Committee Meeting has examined the proposal and after detailed deliberations approved the proposal of M/s Gulbarga Bio Energy Pvt. Ltd. in the name of "Govinahalu MHS" across, Tungabhadra River, near Govinahalu village, Honnali Taluk, Davanagere District for 2 MW at the Geo physical reference of Weir Latitude 14$^{0}$23'00", Longitude 75$^{0}$38'45" and Power House Latitude 14$^{0}$23"49", Longitude 75 38' 30",. ಪ್ರಸ್ತುತ ಗೋವಿನಹಾಳು ಗ್ರಾಮವು ದಾವಣಗೆರೆ ಜಿಲ್ಲೆಯ, ಹೊನ್ನಾಳಿ ತಾಲ್ಲೂಕಿನ ಬದಲು ಹರಿಹರ ತಾಲ್ಲೂಕಿನ, ಮಲೆಬೆನ್ನೂರು ಹೋಬಳಿಯ ವ್ಯಾಪ್ತಿಗೆ ಬರುತ್ತದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲಿನ ಗೋವಿನಹಾಳು ಗ್ರಾಮವು ಪಶ್ಚಿಮ ಘಟ್ಟದ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ತಿಳಿಸಿದ್ದರ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 282 ಎನ್‌ಸಿಇ 2007, ಬೆಂಗಳೂರು, ದಿನಾಂಕ: 13–06–2011**

M/s Gulbarga Bio Energy Pvt. Ltd. ಇವರಿಗೆ ದಾವಣಗೆರೆ ಜಿಲ್ಲೆಯ, ಹರಿಹರ ತಾಲ್ಲೂಕಿನ, ಮಲೆಬೆನ್ನೂರು ಹೋಬಳಿಯ, ಗೋವಿನಹಾಳು ಗ್ರಾಮದ ಬಳಿ ತುಂಗಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋವಿನಹಾಳು ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude 14$^{0}$23'00", Longitude 75$^{0}$38'45" and Power House Latitude 14$^{0}$23"49", Longitude 75 38' 30",) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :-

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು, ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00 ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3, ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ /ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿಆರ್.ನಂ. 1494

## ಇಂಧನ ಸಚಿವಾಲಯ

**ವಿಷಯ :** M/s Gulbarga Bio Energy Pvt. Ltd., ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹಳ್ಳೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕ್ರೆಡಲ್/06/ಹಳ್ಳೂರು/2007/1827 ದಿನಾಂಕ : 17–05–2007/16–08–2007.
2. ದಿನಾಂಕ : 13–02–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. ಸರ್ಕಾರದ ಪತ್ರ ಸಂಖ್ಯೆ ಇಎನ್ 282 ಎನ್‌ಸಿಇ 2007 ದಿನಾಂಕ : 19–03–2009.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಹಳ್ಳೂರು/ಎಂಹೆಚ್‌ಎಸ್/2009/3408 ದಿನಾಂಕ : 20/22–10–2009.
5. ದಿನಾಂಕ : 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
6. ಸರ್ಕಾರದ ಪತ್ರ ಸಂಖ್ಯೆ ಇಎನ್ 285 ಎನ್‌ಸಿಇ 2007 ದಿನಾಂಕ : 14–12–2009.
7. ದಿನಾಂಕ : 25–01–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
8. ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಅಪಜೀ 95 ಎಫ್‌ಎಲ್‌ಎಲ್ 2011 ದಿನಾಂಕ : 10–06–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Gulbarga Bio Energy Pvt. Ltd. (M/s Tulsi Energy Company Pvt. Ltd. ಎಂಬ ಹೆಸರಿನಲ್ಲಿ ಸಲ್ಲಿಸಿದ್ದ ಅರ್ಜಿಯನ್ನು M/s Gulbarga Bio Energy Pvt. Ltd. ಹೆಸರಿನಲ್ಲಿ ಹಂಚಿಕೆ ಮಾಡಬೇಕೆಂದು ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ಪತ್ರದಲ್ಲಿ ತಿಳಿಸಲಾಗಿದೆ) ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಹಳ್ಳೂರು ಗ್ರಾಮದ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹಳ್ಳೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

"M/s Tulsi Energy Company Pvt. Ltd. have applied for 2 MW project on Tungabhadra River near Hallur village.The application should be returned to KREDL, since M/s Tulsi Energy Company Pvt. Ltd. have requested for transfer to M/s Gulbarga Bio Energy Pvt. Ltd. even before allotment has been made and this company is a new legal entity. The application is returned to KREDL".

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ಮೂಲ ಪ್ರಸ್ತಾವನೆಯನ್ನು ಕ್ರೆಡಲ್‌ಗೆ ಹಿಂತಿರುಗಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Gulbarga Bio Energy Pvt. Ltd. ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಹಳ್ಳೂರು ಗ್ರಾಮದ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹಳ್ಳೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಆದೇಶವಾದ ನಂತರ ಪರಿಷ್ಕೃತ ಶುಲ್ಕವನ್ನು ಭರಣ ಮಾಡುವ ಷರತ್ತಿಗೊಳಪಟ್ಟು ಮಂಜೂರಾತಿ ಮಾಡುವಂತೆ ಕೋರಿ ಸರ್ಕಾರಕ್ಕೆ ಪುನಃ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

"M/s Tulsi Energy Company Pvt. Ltd. have applied for 2 MW project on Tungabhadra River near Hallur village. The Company has sought for change of name to M/s Gulbarga Bio Energy Pvt. Ltd. The

committee recommended that the proposal in the name of M/s Gulbarga Bio Energy Pvt. Ltd. can be studied and placed in the next Allotment Committee Meeting".

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಮುಂದಿನ ಹಂಚಿಕೆ ಸಮಿತಿ ಸಭೆಯಲ್ಲಿ ಪುನರ್ ಮಂಡಿಸುವಂತೆ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಸದರಿ ಪ್ರಸ್ತಾವನೆಯನ್ನು ಅನುಮೋದಿಸಲಾಗಿರುತ್ತದೆ. ಸಭೆಯಲ್ಲಿ ಈ ಕೆಳಗಿನಂತೆ ನಿರ್ಣಯವಾಗಿರುತ್ತದೆ.

In the Allotment Committee Meeting has examined the proposal and after detailed deliberations approved the proposal of M/s Gulbarga Bio Energy Pvt. Ltd. in the name of "Hallur MHS" across, Tungabhadra River, near Hallur village, Honnali Taluk, Davanagere District for 2 MW at the Geo physical reference of Weir Latitude $14^0$20'01", Longitude $75^0$37'30" and Power House Latitude $14^0$21"14", Longitude 75 37' 29",. ಪ್ರಸ್ತುತ ಹಳ್ಳೂರು ಗ್ರಾಮವು ಹಾವೇರಿ ಜಿಲ್ಲೆಯ, ಹಿರೇಕೆರೂರು ತಾಲ್ಲೂಕು, ರಟ್ಟಿಹಳ್ಳಿ ಹೋಬಳಿಯ ವ್ಯಾಪ್ತಿಗೆ ಬರುತ್ತದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲಿನ ಹಳ್ಳೂರು ಗ್ರಾಮವು ಪಶ್ಚಿಮ ಘಟ್ಟದ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ತಿಳಿಸಿದ್ದರ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 285 ಎನ್‌ಸಿಇ 2007, ಬೆಂಗಳೂರು, ದಿನಾಂಕ: 13–06–2011**

M/s Gulbarga Bio Energy Pvt. Ltd. ಇವರಿಗೆ ಹಾವೇರಿ ಜಿಲ್ಲೆಯ, ಹಿರೇಕೆರೂರು ತಾಲ್ಲೂಕಿನ, ರಟ್ಟಿಹಳ್ಳಿ ಹೋಬಳಿಯ, ಹಳ್ಳೂರು ಗ್ರಾಮದ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹಳ್ಳೂರು ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude $14^0$20'01", Longitude $75^0$37'30" and Power House Latitude $14^0$21"14", Longitude 75 37' 29",) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :-

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು, ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00 ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3, ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ /ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿಆರ್.ನಂ. 1495 ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ : ಇಎನ್ 238 ಎನ್‌ಸಿಇ 2011, ಬೆಂಗಳೂರು ದಿನಾಂಕ : 13–06–2011**

ಸರ್ಕಾರಿ ಆದೇಶ ಸಂಖ್ಯೆ : ಇಎನ್ 292 ಎನ್‌ಸಿಇ 2010 ದಿನಾಂಕ : 15–09–2010ರ ಆದೇಶದಲ್ಲಿ 'Bio-Mass Gasifier' ಎಂದು ನಮೂದಿಸಿರುವುದನ್ನು 2 MW 'Combustion System (Boiler Turbine) Based Bio-Mass Power Plant' ಎಂದು ತಿದ್ದುಪಡಿಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿಆರ್.ನಂ. 1496 ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಪಾಂಡವಪುರ ರೈಲು ನಿಲ್ದಾಣದ ಬಳಿ ಬರುವ ಎಲ್.ಸಿ.ಸಂ. 95ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣದ ಭೂಸ್ವಾಧೀನ/ಯುಟಿಲಿಟಿ ಸ್ಥಳಾಂತರ/ನಿವೇಶನಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಮೂಅಇ 63 ರಾರಾಹೆ 2007, ದಿನಾಂಕ : 16–06–2009.
2. ದಿನಾಂಕ : 24–05–2011 ರ ಪತ್ರ ಸಂಖ್ಯೆ : ಎಲ್‌ಎಕ್ಯೂ (2) 24 : 2011–12ರ ಮಂಡ್ಯ ಜಿಲ್ಲಾಧಿಕಾರಿಗಳ ಪತ್ರ.

**ಪ್ರಸ್ತಾವನೆ:**

ಪಾಂಡವಪುರ ರೈಲು ನಿಲ್ದಾಣದ ಬಳಿ ಬರುವ ಎಲ್.ಸಿ.ಸಂ. 95ರ ರಸ್ತೆ ಮೇಲೆ ಸೇತುವೆಯ ಕೂಡು ರಸ್ತೆ ನಿರ್ಮಾಣದ ಕಾಮಗಾರಿಯನ್ನು ರೈಲ್ವೆ ಇಲಾಖೆಯು ಕೈಗೆತ್ತಿಕೊಂಡಿದೆ. ಸದರಿ ಕಾಮಗಾರಿಗೆ ಬೇಕಾಗುವ ಭೂಸ್ವಾಧೀನ ವೆಚ್ಚಕ್ಕಾಗಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರೂ. 42.62 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು.

2. ಸದರಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣಕ್ಕಾಗಿ ಬೇಕಾದ ಹೆಚ್ಚುವರಿ ವಿಸ್ತೀರ್ಣದ ಕುರಿತು ಮೋಜಣಿದಾರರ ಹಾಗೂ ಕೋರಿಕೆ ಇಲಾಖೆಯವರ ಸಮಕ್ಷಮ ಅಳತೆ ಮಾಡಲಾಗಿ ಹೆಚ್ಚುವರಿಯಾಗಿ 0.30 1/2 ಗುಂಟೆ ತರಿ ಜಮೀನು ಹಾಗೂ 11.486 ಚದರ ಅಡಿಗಳ ಮನೆ ನಿರ್ಮಿಸಿರುವ ಜಮೀನು ಹಾಗೂ 6632 ಚದರ ಅಡಿಗಳ ಖಾಲಿ ನಿವೇಶನಗಳ ಜಮೀನು ಅಗತ್ಯವಿದ್ದು, ಸದರಿ ವಿಸ್ತೀರ್ಣಕ್ಕೆ ಅಂದಾಜು ಭೂಸ್ವಾಧೀನ ವೆಚ್ಚ ತಃಖ್ತೆಯಂತೆ ರೂ. 1,04,46,104/–ಗಳ ಬೇಕಾಗಿರುವುದರಿಂದ, ಸದರಿ ಮೊತ್ತವನ್ನು ಪಾಂಡವಪುರ ಉಪ ವಿಭಾಗಾಧಿಕಾರಿಯವರಿಗೆ ಬಿಡುಗಡೆ ಮಾಡಬೇಕೆಂದು ಮಂಡ್ಯ ಜಿಲ್ಲಾಧಿಕಾರಿಗಳು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿದ್ದಾರೆ.

3. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 63 ರಾರಾಹೆ 2007, ಬೆಂಗಳೂರು ದಿನಾಂಕ : 07–06–2011**

ಪಾಂಡವಪುರ ರೈಲು ನಿಲ್ದಾಣದ ಬಳಿ ಬರುವ ಎಲ್.ಸಿ.ಸಂ. 95ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣದ ಕಾಮಗಾರಿ ಭೂಸ್ವಾಧೀನ/ಯುಟಿಲಿಟಿ ಸ್ಥಳಾಂತರ/ಖಾಲಿ ನಿವೇಶನ ಸ್ವಾಧೀನದ ಪರಿಹಾರಕ್ಕಾಗಿ ರೂ. 1,04,46, 104/– ಗಳನ್ನು (ರೂಪಾಯಿ ಒಂದು ಕೋಟಿ ನಾಲ್ಕು ಲಕ್ಷದ ನಲವತ್ತಾರು ಸಾವಿರ ಒಂದು ನೂರ ನಾಲ್ಕು ಮಾತ್ರ) 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 21.49 ಕೋಟಿಗಳಿಂದ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಉಪ ವಿಭಾಗಾಧಿಕಾರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿ, ಪಾಂಡವಪುರ ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿಯ ಮೂಲಕ ಮೊತ್ತವನ್ನು ಡ್ರಾಮಾಡಿ ಕೂಡು ರಸ್ತೆ ನಿರ್ಮಾಣದ ಹೆಚ್ಚುವರಿ ಭೂಸ್ವಾಧೀನದ ವೆಚ್ಚ ಭರಿಸತಕ್ಕದ್ದು.

3. ಈ ಆದೇಶವನ್ನು ದಿನಾಂಕ : 16–05–2008 ಸಂಖ್ಯೆ : FD 1TFP 2008, ಸರ್ಕಾರಿ ಆದೇಶದಲ್ಲಿ ಇಲಾಖೆಯು ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿಆರ್.ನಂ. 1497

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಆರ್.ಮೇಘನಾ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ ಇವರ ಇಲಾಖಾ ವಿಚಾರಣೆಯನ್ನು ಕೈಬಿಡುವ ಕುರಿತು.

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಮೈಸೂರು ಇವರ ಪತ್ರ ಸಂಖ್ಯೆ : ಸಿಸಿಎ/ಮಿಸ್ 63/2008–09, ದಿನಾಂಕ : 02–11–2009.
2. ಕಾರಣ ಕೇಳಿ ನೋಟೀಸು ದಿನಾಂಕ : 17–06–2010.
3. ಶ್ರೀಮತಿ ಆರ್.ಮೇಘನಾ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ ಪ್ರಸ್ತುತ ಕಂದಾಯ ಅಧಿಕಾರಿ, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು ಇವರ ಲಿಖಿತ ಸಮಜಾಯಿಷಿ ದಿನಾಂಕ : 19–08–2010.
4. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 36 ಎಡಿಇ 2009, ದಿನಾಂಕ : 08–10–2010.
5. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರ ಪತ್ರ ಸಂಖ್ಯೆ : ಸಿಬ್ಬಂದಿ(4)232/2007–08, ದಿನಾಂಕ : 14–01–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ : 02–12–2009ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ಇವರು ಶ್ರೀಮತಿ ಆರ್.ಮೇಘನಾ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ ಇವರು ದಿನಾಂಕ : 27–05–2008 ರಿಂದ 09–06–2008 ರವರೆಗೆ ಒಟ್ಟು 14 ದಿನಗಳು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದುದಲ್ಲದೇ ದಿನಾಂಕ : 10–06–2008 ರಂದು ಕಛೇರಿಗೆ ಹಾಜರಾಗಿ ಮೇಲಧಿಕಾರಿಗಳಿಗೆ ಯಾವುದೇ ಮಾಹಿತಿಯನ್ನು ನೀಡದೇ ಮತ್ತು ಮೇಲಧಿಕಾರಿಗಳ ಯಾವುದೇ ಅನುಮತಿಯನ್ನು ಪಡೆಯದೇ ಕಛೇರಿ ಹಾಜರಾತಿ ಪುಸ್ತಕದಲ್ಲಿ ದಿನಾಂಕ : 27–05–2008 ರಿಂದ 09–06–2008 ರವರೆಗಿನ ಅವಧಿಗೂ ಸೇರಿದಂತೆ ಏಕ ಕಾಲದಲ್ಲಿ ಏಕಾ ಏಕಿ ಸಹಿ ಮಾಡಿ 1957ರ ಕೆಸಿಎಸ್ ನಿಯಮಾವಳಿಗಳ ನಿಯಮ 106ಎ 108ನ್ನು ಉಲ್ಲಂಘಿಸಿರುತ್ತಾರೆಂದು ಮತ್ತು ಈ ಗೈರು ಹಾಜರಿ ಅವಧಿಯಲ್ಲಿ ಅವರು ಚುನಾವಣಾ ತಹಶೀಲ್ದಾರರ ಪ್ರಭಾರವನ್ನು ಯಾವುದೇ ಅಧಿಕಾರಿಗೆ ವಹಿಸದೇ ಕರ್ತವ್ಯ ನಿರ್ಲಕ್ಷತೆಯನ್ನು ಸಹ ತೋರಿಸಿರುತ್ತಾರೆಂದು ತಿಳಿಸುತ್ತಾ, ದೋಷಾರೋಪಣಾ ಪಟ್ಟಿ ಮತ್ತು ದಾಖಲೆಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸಿ ಸದರಿ ತಹಶೀಲ್ದಾರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ : 17–06–2010ರನ್ವಯ ಸದರಿ ತಹಶೀಲ್ದಾರರಿಗೆ ದೋಷಾರೋಪಣಾ ಪಟ್ಟಿಗಳೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸಿಗೆ ತಹಶೀಲ್ದಾರ್‌ರವರು ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ : 19–08–2010ರ ಲಿಖಿತ ಸಮಜಾಯಿಷಿಯಲ್ಲಿ ತಾವು ದಿನಾಂಕ : 25–05–2008 ರವರೆವಿಗೂ ಚುನಾವಣಾ ಕರ್ತವ್ಯದಲ್ಲಿ ತೊಡಗಿಸಿಕೊಂಡು ಹಗಲು ರಾತ್ರಿಯೆನ್ನದೇ ಕರ್ತವ್ಯ ನಿರ್ವಹಿಸಿದ ನಂತರ ದಿನಾಂಕ : 23–06–2008 ರಂದು ತಮ್ಮ ವಿವಾಹ ಏರ್ಪಾಡಾಗಿದ್ದರಿಂದ ರಜೆಯ ಮೇಲೆ ತೆರಳಿದ್ದು, ಇದನ್ನು ಮಾನ್ಯ ಜಿಲ್ಲಾಧಿಕಾರಿಗಳಿಗೆ ಮೌಖಿಕವಾಗಿ ತಿಳಿಸಿದ್ದು, ಕಣ್ತಪ್ಪಿನಿಂದ ಹಾಜರಾತಿ ಪುಸ್ತಕದಲ್ಲಿ ಸಹಿ ಮಾಡಿದ್ದು ಇದ್ದು ದುರುದ್ದೇಶಪೂರಿತ ಕ್ರಮವಲ್ಲ ಎಂದು ತಿಳಿಸುತ್ತಾ ಈ ಬಗ್ಗೆ ಜಿಲ್ಲಾಧಿಕಾರಿಗಳು ದಿನಾಂಕ : 11–06–2008 ರಂದು ನೀಡಿದ ಕಾರಣ ಕೇಳುವ ಸೂಚನಾ ಪತ್ರಕ್ಕೆ ಉತ್ತರ ನೀಡಿರುವ ವಿವರಣೆಯನ್ನು ಒಪ್ಪಿ ಜಿಲ್ಲಾಧಿಕಾರಿಗಳು ತಮಗೆ ದಿನಾಂಕ : 27–05–2008 ರಿಂದ 11–07–2008ರವರೆಗೆ ಗಳಿಕೆ ರಜೆ ಹಾಗೂ ದಿನಾಂಕ : 12–07–2008, 13–07–2008 ರಂದು ಸಾರ್ವತ್ರಿಕ ರಜೆ ಉಪಯೋಗಿಸಿಕೊಳ್ಳಲು ಅನುಮತಿ ನೀಡಿರುತ್ತಾರೆ ಎಂದು ತಿಳಿಸುತ್ತಾ, ಸದರಿ ಗೈರು ಹಾಜರಾತಿ ಅವಧಿಯನ್ನು ಜಿಲ್ಲಾಧಿಕಾರಿಗಳು ಗಳಿಕೆ ರಜೆ ಎಂದು ಮಂಜೂರು ಮಾಡಿರುವುದರಿಂದ ಹಾಗೂ ಮಾನ್ಯ ಕರ್ನಾಟಕ ನ್ಯಾಯ ಮಂಡಳಿಯು ಡಾ. ಜಯಮ್ಮ ಹೆಚ್. ವಿರುದ್ಧ ರಾಜ್ಯ ಸರ್ಕಾರ ಪ್ರಕರಣದಲ್ಲಿ (1993 ಕೆಎಸ್‌ಎಲ್‌ಟಿ 998) ಅಂತಿಮ ಆದೇಶದಲ್ಲಿ ಹೇಳಿರುವಂತೆ ರಜೆ ಮಂಜೂರು ಮಾಡುವ ಸಂಬಂಧಿಸಿದ ಅಧಿಕಾರಿಯು ಅಧಿಕಾರಿ/ನೌಕರರೊಬ್ಬರ ಗೈರು ಹಾಜರಾತಿಗೆ ನೀಡಿರುವ ವಿವರಣೆಯನ್ನು ಒಪ್ಪಿ ರಜೆಯನ್ನು ಮಂಜೂರು ಮಾಡಿ ಆದೇಶಿಸಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಶಿಸ್ತಿನ ಕ್ರಮವನ್ನು ಆರಂಭಿಸುವುದು ನಿಯಮಗಳ ಅನುಸಾರ ಸಿಂಧುವಾಗುವುದಿಲ್ಲ ಎಂದಿರುತ್ತದೆ. ಈ ಸಂಗತಿಯನ್ನು ಗಣನೆಗೆ ತೆಗೆದುಕೊಂಡು ತಮ್ಮ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ವಿನಂತಿಸಿಕೊಂಡಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ : 18–10–2010ರ ಪತ್ರದಲ್ಲಿ ತಹಶೀಲ್ದಾರ್ ರವರು ನೀಡಿದ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ನೀಡುವಂತೆ ಮಂಡ್ಯ ಜಿಲ್ಲಾಧಿಕಾರಿಗಳನ್ನು ಕೋರಲಾಯಿತು. ಅದರಂತೆ ಮಂಡ್ಯ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ : 14–01–2011ರ ಪತ್ರದಲ್ಲಿ ಸದರಿ ಅಧಿಕಾರಿಗಳಿಗೆ ದಿನಾಂಕ : 27–05–2008 ರಿಂದ 11–07–2008 ರವರೆಗೆ ಗಳಿಕೆ ರಜೆಯನ್ನು ಹಾಗೂ 12–07–2008 ಮತ್ತು 13–07–2008ರ ಎರಡು ದಿವಸಗಳ ಸಾರ್ವತ್ರಿಕ ರಜೆಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಿರುವುದರಿಂದ ಮಾನ್ಯ ಕರ್ನಾಟಕ ಆಡಳಿತ ಮಂಡಳಿಯು ಡಾ. ಜಯಮ್ಮ ಹೆಚ್. ವಿರುದ್ಧ ರಾಜ್ಯ ಸರ್ಕಾರದ ಪ್ರಕರಣದಲ್ಲಿ (1993 ಕೆಎಸ್‌ಎಲ್‌ಟಿ 998)ರ ತೀರ್ಪಿನ ಹಿನ್ನೆಲೆಯಲ್ಲಿ ಮುಕ್ತಾಯಗೊಳಿಸಲು ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ತಹಶೀಲ್ದಾರರ ಮೇಲಿನ ಆರೋಪಗಳ ಬಗ್ಗೆ ತಹಶೀಲ್ದಾರ್‌ರವರು ನೀಡಿರುವ ಲಿಖಿತ ಸಮಜಾಯಿಷಿಯ ಮಂಡ್ಯ ಜಿಲ್ಲಾಧಿಕಾರಿಗಳ ಅಭಿಪ್ರಾಯವನ್ನು ಹಾಗೂ ಮಾನ್ಯ ಕರ್ನಾಟಕ ಆಡಳಿತ ಮಂಡಳಿಯು ಡಾ.ಜಯಮ್ಮ ಹೆಚ್. ವಿರುದ್ಧ ರಾಜ್ಯ ಸರ್ಕಾರದ ಪ್ರಕರಣದಲ್ಲಿ (1993 ಕೆಎಸ್‌ಎಲ್‌ಟಿ 998)ರ ತೀರ್ಪಿನ ಹಿನ್ನೆಲೆಯಲ್ಲಿ ಎಲ್ಲಾ ಅಂಶಗಳನ್ನು ಸರ್ಕಾರವು ಪರಿಗಣಿಸಿ ಸದರಿ ತಹಶೀಲ್ದಾರರ ವಿರುದ್ಧ ಪ್ರಾರಂಭಿಸಿದ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 36 ಎಡಿಇ 2009, ಬೆಂಗಳೂರು ದಿನಾಂಕ : 03-06-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಆರ್. ಮೇಘನಾ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ ಪ್ರಸ್ತುತ ಕಂದಾಯ ಅಧಿಕಾರಿ, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಸರ್ಕಾರವು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

ಪಿಆರ್.ನಂ. 1498

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್, ತರೀಕೆರೆ ತಾಲ್ಲೂಕು ಇವರು ಲಂಚ ಪ್ರಕರಣದಲ್ಲಿ ಸಿಲುಕಿಕೊಂಡ ಹಿನ್ನೆಲೆಯಲ್ಲಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)ಎಂ/ಸಿಆರ್/07-2011, ಚಿಕ್ಕಮಗಳೂರು ದಿನಾಂಕ : 16-05-2011.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 16-05-2011ರ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಫಿರ್ಯಾದುದಾರರಾದ ಶ್ರೀ ಹೆಚ್.ಜೆ. ಸುರ್ಜಿತ್ ಬಿನ್ ಜಯರಾಮೇಗೌಡ, ಕೃಷಿಕ, ಲಕ್ಕೊಳ್ಳಿ ಹೋಬಳಿ, ತರೀಕೆರೆ ತಾಲ್ಲೂಕು ಇವರು ದೊಡ್ಡಕುಂದೂರು ಗ್ರಾಮದ ಸ.ನಂ. 3/ಪಿ ರಲ್ಲಿ 47-00 ಎಕರೆ ಜಮೀನಿದ್ದು, ಆ ಜಮೀನನ್ನು ಮಾರಾಟ ಮಾಡುವ ಸಲುವಾಗಿ ಜಮೀನುಗಳ ದುರಸ್ಥಿ ಮಾಡಿಸುವ ಸಂಬಂಧ ಸುಮಾರು 1 ವರ್ಷದ ಹಿಂದೆ ಮಾರ್ಚ್ 2010ರಂದು ತರೀಕೆರೆ ತಾಲ್ಲೂಕು ಕಛೇರಿಗೆ ಅರ್ಜಿ ಸಲ್ಲಿಸಿದ್ದರೂ ಜಮೀನುಗಳ ದುರಸ್ಥಿ ಕೆಲಸ ಆಗಿಲ್ಲದಿರುವ ಬಗ್ಗೆ ದಿನಾಂಕ : 08-04-2011 ರಂದು ಶ್ರೀ ಸಿ.ಜೆ.ಕೃಷ್ಣಕುಮಾರ್, ತಹಶೀಲ್ದಾರ್‌ರವರನ್ನು ಭೇಟಿ ಮಾಡಿ ವಿಚಾರಿಸಲಾಗಿ, ಜಮೀನುಗಳ ದುರಸ್ಥಿ ಸಂಬಂಧ ನನಗೂ ಮತ್ತು ತಾಲ್ಲೂಕು ಸರ್ವೇಯರ್‌ರವರಿಗೆ ಒಟ್ಟು 2 ಲಕ್ಷ ರೂ.ಗಳನ್ನು ಕೊಡಬೇಕೆಂದು ತಗಾದೆ ಮಾಡಿರುತ್ತಾರೆಂದು ನಂತರ ಫಿರ್ಯಾದುದಾರರು ಪುನಃ ದಿನಾಂಕ : 23-04-2004 ರಂದು ಸರ್ವೇಯರ್ ರಮೇಶ್ ರವರನ್ನು ಭೇಟಿ ಮಾಡಿ ವಿಚಾರಿಸಿದಾಗ 1 ಲಕ್ಷ ರೂ.ಗಳ ಮೊತ್ತವನ್ನು ನೀಡುವಂತೆ ಒತ್ತಾಯಿಸಿರುತ್ತಾರೆ. ಆದರೆ, ಫಿರ್ಯಾದುದಾರರು ಲಂಚದ ಹಣ ನೀಡಲು ಇಷ್ಟವಿಲ್ಲದ ಕಾರಣ ಲೋಕಾಯುಕ್ತ ಪೋಲೀಸಿನವರಿಗೆ ದೂರನ್ನು ನೀಡಿರುತ್ತಾರೆ. ದಿನಾಂಕ : 29-04-2011 ರಂದು ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್, ತರೀಕೆರೆ ಮತ್ತು ಶ್ರೀ ರಮೇಶ್, ಭೂಮಾಪಕರು ಲಂಚದ ಹಣ ರೂ. 1 ಲಕ್ಷಕ್ಕೆ ಒತ್ತಾಯಿಸಿ, ಅದನ್ನು ಸ್ವೀಕರಿಸುವಾಗ ಪೋಲೀಸರ ಬಲೆಗೆ ಸಿಕ್ಕಿ ಬಿದ್ದಿರುತ್ತಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ಪೋಲೀಸ್ ಮಹಾ ನಿರ್ದೇಶಕರು, ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್‌ರವರನ್ನು ಅಮಾನತ್ತಿನಲ್ಲಿಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಶ್ರೀ ಸಿ.ಜೆ. ಕೃಷ್ಣಕುಮಾರ್ , ತಹಶೀಲ್ದಾರ್‌ರವರನ್ನು ಅಮಾನತ್ತಿನಲ್ಲಿಡುವ ಬಗ್ಗೆ ಒದಗಿಸಿರುವ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಲಂಚದ ಹಣವನ್ನು ತಹಶೀಲ್ದಾರ್‌ರವರ ವಾಸದ ಮನೆಯ ವರಾಂಡದಲ್ಲಿ ಹಾಕಿದ ದಿವಾನ್ ಕಾಟ್‌ಗೆ ಹಾಕಿದ್ದ ಕಾರ್ಪೆಟ್ ಮೇಲೆ ಇಟ್ಟು ಮತ್ತು ಅದರ ಮೇಲೆ ಕಾರ್ಪೆಟ್ಟನ್ನು ಮುಚ್ಚುವಂತೆ ಆರೋಪಿತರು ಫಿರ್ಯಾದಿಗೆ ತಿಳಿಸಿದ್ದು, ಫಿರ್ಯಾದಿಯು ಅದೇ ರೀತಿ ಮಾಡಿದ್ದು, ಈ ಬಗೆಗಿನ ಧ್ವನಿಯನ್ನು ರೆಕಾರ್ಡ್ ಮಾಡಿಕೊಂಡಿರುವುದಾಗಿ ದಾಖಲೆಯಲ್ಲಿ ತಿಳಿಸಲಾಗಿದೆ. ತದನಂತರ ಸದರಿ ಲಂಚದ ಹಣವನ್ನು ವಶಪಡಿಸಿಕೊಳ್ಳಲಾಗಿದೆ. ವಶಪಡಿಸಿಕೊಂಡಿರುವ ಬಗ್ಗೆ ನೆರಳಿನಂತೆ ಹಿಂಬಾಲಿಸಿದ ಸಾಕ್ಷಿದಾರರು ಪ್ರಕರಣವನ್ನು ಬೆಂಬಲಿಸಿರುತ್ತಾರೆ. ಇದಲ್ಲದೇ ಟ್ರ್ಯಾಪ್ ಪಂಚನಾಮೆ ದಾಖಲೆ ಮತ್ತು ಹಣ ವಶಪಡಿಸಿಕೊಂಡ ನೋಟುಗಳ ಕ್ರಮ ಸಂಖ್ಯೆ ಮತ್ತು ಪ್ರಥಮ ವರ್ತಮಾನ ವರದಿ ಈ ಎಲ್ಲಾ ಸಾಕ್ಷಾಧಾರಗಳಿಂದ/ಸಾಮಾಗ್ರಿಗಳಿಂದ (material) ಆರೋಪಿತ ಅಧಿಕಾರಿಯಾದ ಶ್ರೀ ಸಿ.ಜೆ.ಕೃಷ್ಣಕುಮಾರ್, ತಹಶೀಲ್ದಾರ್‌ರವರನ್ನು ಅಮಾನತ್ತಿನಲ್ಲಿಡಲು ಮೇಲ್ನೋಟಕ್ಕೆ ಒಂದು ಸ್ಪಷ್ಟ ಪ್ರಕರಣವಿರುವುದು ಸರ್ಕಾರಕ್ಕೆ ಮನದಟ್ಟಾಗಿದೆ. ಆದುದರಿಂದ ಸದರಿ ತಹಶೀಲ್ದಾರ್ ಶ್ರೀ ಸಿ.ಜೆ. ಕೃಷ್ಣಕುಮಾರ್‌ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 24 ಎಡಿಇ 2011, ಬೆಂಗಳೂರು ದಿನಾಂಕ : 04-06-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಸರ್ಕಾರವು ಚಲಾಯಿಸಿ ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್, ತರೀಕೆರೆ ತಾಲ್ಲೂಕು ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಮತ್ತು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಅಭಿವೃದ್ಧಿ ಇಲಾಖೆ (ಸೇವೆಗಳು-3)

ಪಿಆರ್.ನಂ. 1499

## ಕಂದಾಯ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್ ಬಾಗಲಕೋಟೆ ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯ ಮಂತ್ರಿಯವರ ಕಾರ್ಯದರ್ಶಿಗಳ ಟಿಪ್ಪಣಿ ಸಂ : ಮುಮಕಾ/2847/2010, ದಿನಾಂಕ : 20–05–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಬಾಗಲಕೋಟೆ ಜಿಲ್ಲೆಯ ಮುಧೋಳ, ಜಮಖಂಡಿ ಮತ್ತು ಹುನಗುಂದ ತಾಲ್ಲೂಕಿನಲ್ಲಿ ಆಸರೆ ಯೋಜನೆಯಡಿಯಲ್ಲಿ ಒಟ್ಟು 693 ಮನೆಗಳನ್ನು ನಿರ್ಮಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರಿಗೆ ವಹಿಸಲಾಗಿತ್ತು. ಸದರಿ ಮನೆಗಳ ನಿರ್ಮಾಣ ವೆಚ್ಚ ರೂ. 922.80 ಲಕ್ಷಗಳಾಗಿದ್ದು, ಇದರಲ್ಲಿ ರೂ. 500.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ಇನ್ನು ಬಾಕಿ ಉಳಿದ ರೂ. 422.80 ಲಕ್ಷಗಳನ್ನು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರಿಗೆ ಬಿಡುಗಡೆ ಮಾಡಲು ಮಾನ್ಯ ಮುಖ್ಯ ಮಂತ್ರಿಗಳು ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ಸದರಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಮಾನ್ಯ ಮುಖ್ಯಮಂತ್ರಿಗಳ ಕಾರ್ಯದರ್ಶಿಗಳು ಕೋರಿರುತ್ತಾರೆ. ಆದ್ದರಿಂದ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 174 ಟಿಎನ್‌ಆರ್ 2010, ಬೆಂಗಳೂರು ದಿನಾಂಕ : 04–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಾಗಲಕೋಟೆ ಜಿಲ್ಲೆಯಲ್ಲಿ ಆಸರೆ ಯೋಜನೆ ಅಡಿಯಲ್ಲಿ ಒಟ್ಟು 693 ಮನೆಗಳನ್ನು ನಿರ್ಮಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರಿಗೆ ಬಾಕಿ ಉಳಿದ ರೂ. 4,22,80,000/–ಗಳ (ರೂಪಾಯಿ ನಾಲ್ಕು ಕೋಟಿ ಇಪ್ಪತ್ತೆರಡು ಲಕ್ಷ ಎಂಬತ್ತು ಸಾವಿರ ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆ **8235–00–111–0–02 " Public Contributions to Calamity Relief "** ಅಡಿಯಲ್ಲಿ ಡ್ರಾ ಮಾಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರು ಪೇಯೀಸ್ ರಸೀದಿ ಬಿಲ್ಲು (ಸಿಟಿಎಸ್–8) ತಯಾರಿಸಿ ಮೇಲು ರುಜು ಮಾಡಿ ಬಾಗಲಕೋಟೆ ಖಜಾನೆಯಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿಯೇ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಮಾನ್ಯ ಮುಖ್ಯ ಮಂತ್ರಿಗಳ ಕಾರ್ಯದರ್ಶಿಗಳ ಟಿಪ್ಪಣಿ ಸಂ : ಮುಮಕಾ/2847/2010, ದಿನಾಂಕ : 20–05–2011ರ ಅನುಮೋದನೆಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿಆರ್.ನಂ. 1500 ಕಂದಾಯ ಇಲಾಖೆ (ವಿ. ನಿ. & ಸೇವೆಗಳು–2)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕಿನ ಇಂಗಳಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾಪ್ರ/2010–11/39, ದಿನಾಂಕ : 04–01–2011.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕಿನ ಇಂಗಳಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗೆ ಅವಾರ್ಡ್ ಪೂರ್ವ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ದಿನಾಂಕ : 04–01–2011ರ ಪತ್ರದಲ್ಲಿ ಕೋರಿದ್ದಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ : ಕಂಇ 42 ಭೂಸ್ವಾಹಾ 2000, ದಿನಾಂಕ : 08–10–2001 ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 19 ಭೂಸ್ವಾಪ್ರ 2011, ಬೆಂಗಳೂರು ದಿನಾಂಕ : 14–06–2011**

ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕಿನ ಇಂಗಳಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ರೂ. 1,49,384–00 ಗಳನ್ನು (ಒಂದು ಲಕ್ಷದ ನಲವತ್ತೊಂಬತ್ತು ಸಾವಿರದ ಮುನ್ನೂರ ಎಂಭತ್ತಾ್ನಲ್ಕು ರೂ.ಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡುವ ಸಲುವಾಗಿ ಬಿಡುಗಡೆ ಮಾಡಲು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 1,49,384–00 ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ : 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿಆರ್.ನಂ. 1501 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆಗೆ ಸಂಬಂಧಿಸಿದಂತೆ ಇಲಾಖಾ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚನೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :** ದಿನಾಂಕ : 11–08–2010ರ ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 159 ಸ್ತೀಮರ 2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ : 11–08–2011ರ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಅಧೀನ ಇಲಾಖೆಗಳಿಗೆ ಸಂಬಂಧಿಸಿದಂತೆ ಹಾರ್ಡ್‌ವೇರ್, ಸಾಫ್ಟ್ ವೇರ್, ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಹಾಗೂ ವಿವಿಧ ಇಲಾಖೆಗಳ ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ಸದರಿ ತಾಂತ್ರಿಕ ಸಲಹಾ ಸಮಿತಿಗೆ ಆರ್ಥಿಕ ಹಾಗೂ ಯೋಜನಾ ಇಲಾಖೆಯ ಪ್ರತಿನಿಧಿಗಳನ್ನು ನೇಮಕ ಮಾಡಬೇಕಾಗಿರುವುದರಿಂದ ಸಲಹಾ ಸಮಿತಿಯನ್ನು ಪುನರ್ ರಚಿಸಲು ಉದ್ದೇಶಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 150 ಸ್ತೀಮರ 2011, ಬೆಂಗಳೂರು ದಿನಾಂಕ : 03–06–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಅಧೀನ ಇಲಾಖೆಗಳಿಗೆ ಸಂಬಂಧಿಸಿದಂತೆ ಹಾರ್ಡ್‌ವೇರ್, ಸಾಫ್ಟ್‌ವೇರ್, ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಹಾಗೂ ವಿವಿಧ ಇಲಾಖೆಗಳ ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ದಿನಾಂಕ : 11–08–2010ರಂದು ರಚಿಸಲಾದ ತಾಂತ್ರಿಕ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

1. ಸರ್ಕಾರದ ಕಾರ್ಯದರ್ಶಿ,
   ಕನ್ನಡ ಮತ್ತು ಸಂಸ್ಕೃತಿ , ವಾರ್ತಾ ಇಲಾಖೆ — ಅಧ್ಯಕ್ಷರು
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ
   ನಿರ್ದೇಶನಾಲಯ, ಬೆಂಗಳೂರು — ಸದಸ್ಯರು
3. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ
   ನಿರ್ದೇಶನಾಲಯ, ಮೈಸೂರು — ಸದಸ್ಯರು
4. ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು — ಸದಸ್ಯರು
5. ನಿರ್ದೇಶಕರು, ಪತ್ರಾಗಾರ ಇಲಾಖೆ, ಬೆಂಗಳೂರು — ಸದಸ್ಯರು
6. ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯ
   ಮತ್ತು ಪರಂಪರೆ ಇಲಾಖೆ, ಬೆಂಗಳೂರು — ಸದಸ್ಯರು
7. ಮುಖ್ಯ ಸಂಪಾದಕರು, ಗೆಜೆಟಿಯರ್ ಇಲಾಖೆ — ಸದಸ್ಯರು
8. ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ
   ನಿರ್ವಹಣಾ ಪ್ರಾಧಿಕಾರ, ಹಂಪಿ — ಸದಸ್ಯರು
9. ಸರ್ಕಾರದ ಕಾರ್ಯದರ್ಶಿ ಅಥವಾ ಅವರ ಪ್ರತಿನಿಧಿ, ಆರ್ಥಿಕ ಇಲಾಖೆ — ಸದಸ್ಯರು
10. ನಿರ್ದೇಶಕರು, ಜನಶಕ್ತಿ ಮತ್ತು ಉದ್ಯೋಗ ವಿಭಾಗ
    ಯೋಜನಾ ಇಲಾಖೆ ಅಥವಾ ಅವರ ಪ್ರತಿನಿಧಿ — ಸದಸ್ಯರು
11. ಸೀನೀಯರ್ ಪ್ರೋಗ್ರಾಮರ್, ಸಿಆಸುಇ (ಇ–ಆಡಳಿತ) — ನೋಡಲ್ ಅಧಿಕಾರಿ
12. ಶ್ರೀ ಬಿ.ಪಿ. ಶಶಿಧರ್ — ತಾಂತ್ರಿಕ ತಜ್ಞರು
    Sc "F" Project Director RTS,
    Aeronautical Development Establishment, DRDO,
    New Thippasandra Road,
    Bangalore-560 075.
    Ph : Off : 25057672
    Res : 26752784
    Mob : 9440957955 Fax : 25057685
    Email : bps@ade.drdo.in
13. ಶ್ರೀ ವಿ. ಶ್ರೀನಿವಾಸನ್ — ತಾಂತ್ರಿಕ ತಜ್ಞರು
    Sc "F" CMID(MITS) Divn., Electronics &
    Radar Development Estt. (LRDE), DRDO, Complex,
    C.V. Raman Nagar, Bangalore-560 093.
    Ph : Off : 25242368
    Res : 25268234
    Fax : 25242916
    Mob : 9448453906
    email-vs: Srini@rediffmail.com
14. ಸರ್ಕಾರದ ಉಪ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
    ವಾರ್ತಾ ಇಲಾಖೆ — ಸದಸ್ಯ–ಕಾರ್ಯದರ್ಶಿ

ಮೇಲ್ಕಂಡ ಕ್ರಮ ಸಂಖ್ಯೆ (2) ರಿಂದ (8)ರಲ್ಲಿನ ಅಧಿಕಾರಿಗಳು ಅವರವರ ಇಲಾಖೆಗಳಿಗೆ ಸಂಬಂಧಿಸಿದಂತಹ ಗಣಕೀಕರಣದ ಬಗ್ಗೆ ಸೇವೆಯನ್ನು ಪಡೆಯುವ ಸಂದರ್ಭದಲ್ಲಿ ಮಾತ್ರ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ಭಾಗವಹಿಸಿ ಉಪಯುಕ್ತ ಸಲಹೆ ಸೂಚನೆಗಳನ್ನು ನೀಡುವುದು.

ತಾಂತ್ರಿಕ ಸಲಹಾ ಸಮಿತಿಯ ಸಭೆಯನ್ನು ಏರ್ಪಡಿಸುವಾಗ ಇಬ್ಬರು ತಾಂತ್ರಿಕ ತಜ್ಞರನ್ನು ಸಹ ಸಭೆಗೆ ಕಡ್ಡಾಯವಾಗಿ ಕರೆಯುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿಆರ್.ನಂ. 1502

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಹೊಸಪೇಟೆ, ಇಲ್ಲಿಗೆ ಆರೋಗ್ಯ ನಿರೀಕ್ಷಕರ ಹುದ್ದೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂ. ಕಸಂವಾಪ್ರ 253 ಕೆಎಂಯು 2007 ದಿನಾಂಕ : 28–05–2008.

2. ದಿನಾಂಕ ; 12–10–2010 ರಂದು ಕೊನೆಗೊಂಡ ಪತ್ರ ಸಂ: ಹವಿಪಪ್ರನಿಪಾ/ಹೊ/18/15/2/2009–10/923.

**ಪ್ರಸ್ತಾವನೆ :**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಈ ಕೆಳಕಂಡ 17 ಹುದ್ದೆಗಳನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿದೆ:–

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀಕ್ಷಕರು | 1 |
| 2. | ಪ್ರಥಮ ದರ್ಜೆ ಸಹಾಯಕರು | 2 |
| 3. | ವಾಹನ ಚಾಲಕ | 2 |
| 4. | ಸಿವಿಲ್ ಇಂಜಿನಿಯರ್ | 2 |
| 5. | ಸರ್ವೇಯರ್ | 2 |
| 6. | ಯೋಜನಾ ವ್ಯವಸ್ಥಾಪಕರು | 1 |
| 7. | ಸಂರಕ್ಷಣಾ ವಾಸ್ತುಶಿಲ್ಪಿ | 1 |
| 8. | ವಾಸ್ತುಶಿಲ್ಪಿ | 1 |
| 9. | ಆರ್ಕಿಯಾಲಜಿಸ್ಟ್ | 1 |
| 10 | ಸಂಸ್ಕೃತಿ ಸಮನ್ವಯ ಅಧಿಕಾರಿ | 1 |
| 11. | ಸಾಮಾಜಿಕ ಸಮನ್ವಯ ಅಧಿಕಾರಿ | 1 |
| 12 | GIS ವಿಶ್ಲೇಷಕರು | 1 |
| 13 | ಗ್ರಂಥಪಾಲಕರು | 1 |
| | ಒಟ್ಟು | 17 |

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ಘನತ್ಯಾಜ್ಯ ವಸ್ತುಗಳ ನಿರ್ವಹಣಾ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕೆ ಮತ್ತು ಘನತ್ಯಾಜ್ಯ ವಸ್ತುಗಳ ವಿಲೇವಾರಿ ಮತ್ತು ನಿರ್ವಹಣೆ, ಚರಂಡಿಗಳ ನಿರ್ವಹಣೆ, ಸಂಕ್ರಾಮಿಕ ಹಾಗೂ ಸೋಂಕು ರೋಗ ನಿಯಂತ್ರಣ ಶುದ್ಧ ಕುಡಿಯುವ ನೀರಿನ ಪೂರೈಕೆ, ಬಿಡಾಡಿ ದನ/ನಾಯಿ/ಹಂದಿಗಳ ನಿಯಂತ್ರಣ ರಸ್ತೆಗಳ ಕಸಗುಡಿಸುವ ಹಾಗೂ ಹಂಪಿಗೆ ಬರುವ ಪ್ರವಾಸಿಗರಿಗೆ ಮೂಲಭೂತ ಸೌಕರ್ಯಗಳಲ್ಲಿ ಒಂದಾದ ಶೌಚಾಲಯಗಳನ್ನು ನಿರ್ಮಿಸುವ ಯೋಜನೆಯನ್ನು ಸಹ ಹಮ್ಮಿಕೊಂಡಿದ್ದು, ಈ ಎಲ್ಲಾ ಯೋಜನೆಗಳ ಮೇಲ್ವಿಚಾರಣೆ ಹಾಗೂ ಗ್ರಾಮ ಪಂಚಾಯತಿಗಳಿಗೆ ಸಲಹೆ ಮತ್ತು ಸೂಚನೆಗಳನ್ನು ನೀಡಲು ಪ್ರಾಧಿಕಾರಕ್ಕೆ ಎರಡು(2) ಆರೋಗ್ಯ ನಿರೀಕ್ಷಕರ ಹುದ್ದೆ ಅವಶ್ಯವಿರುವುದರಿಂದ ಪ್ರಾಧಿಕಾರಕ್ಕೆ ಮಂಜೂರಾದ 17 ಹುದ್ದೆಗಳಲ್ಲಿ ಅಧೀಕ್ಷಕರು ಹಾಗೂ ಸಾಂಸ್ಕೃತಿಕ ಸಮನ್ವಯ ಅಧಿಕಾರಿ ಹುದ್ದೆಗಳ ಬದಲಾಗಿ 2 ಆರೋಗ್ಯ ನಿರೀಕ್ಷಕರ ಹುದ್ದೆಗಳನ್ನು ಮಂಜೂರು ಮಾಡುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 104 ಕೆಎಂಯು 2010, ಬೆಂಗಳೂರು, ದಿನಾಂಕ : 27–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಮಂಜೂರಾಗಿರುವ ಒಂದು ಸಾಂಸ್ಕೃತಿಕ ಸಮನ್ವಯ ಅಧಿಕಾರಿ ಹುದ್ದೆಯನ್ನು ರದ್ದುಪಡಿಸಿ ಒಂದು ಆರೋಗ್ಯ ನಿರೀಕ್ಷಕರ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಹುದ್ದೆಯನ್ನು ನಿಯೋಜನೆ ಮೇಲೆ ಮಾತ್ರ ಭರ್ತಿ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 404 ವೆಚ್ಚ–7/2011 ದಿನಾಂಕ: 09–05–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ವಿ. ರಾಮಚಂದ್ರರಾವು**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1503

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ(ಪ್ರ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

ಸೇರ್ಪಡೆ

ಸಂಖ್ಯೆ: ಕಸಂವಾಪ್ರ 150 ಸ್ವೀಮರ 2011, ಬೆಂಗಳೂರು ದಿ: 10–06–2011

ದಿನಾಂಕ 3–6–2011ರ ಸರ್ಕಾರದ ಆದೇಶ ಸಂಖ್ಯೆ ; ಕಸಂವಾಪ್ರ 150 ಸ್ವೀಮರ 2011ರ ಪುಟ 2 ರಲ್ಲಿನ ಕ್ರಮ ಸಂಖ್ಯೆ: 10ರ ನಂತರ ಈ ಕೆಳಗಿನಂತೆ ಸೇರ್ಪಡೆ ಮಾಡಲಾಗಿದೆ.

10(ಎ) ನಿರ್ದೇಶಕರು ಅಥವಾ ಪ್ರತಿನಿಧಿ ಸದಸ್ಯರು

ರಾಷ್ಟ್ರೀಯ ಮಾಹಿತಿ ಕೇಂದ್ರ, ಬೆಂಗಳೂರು

ಹಾಗೂ

ಅದೇ ಆದೇಶದಲ್ಲಿನ ಪುಟ 3ರ ಮೊದಲಿನ ಕಂಡಿಕೆ ಬದಲಿಗೆ ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

ತಾಂತ್ರಿಕ ಸಲಹಾ ಸಮಿತಿ ಸಭೆಗೆ ಇಬ್ಬರು ತಾಂತ್ರಿಕ ತಜ್ಞರಿರಬೇಕು. ಅದರಲ್ಲಿ ಕನಿಷ್ಠ ಒಬ್ಬರು ರಾಷ್ಟ್ರೀಯ ಮಾಹಿತಿ ಕೇಂದ್ರ ಅಥವಾ ಇ–ಆಡಳಿತದ ಪ್ರತಿನಿಧಿ ಹಾಗೂ ತಾಂತ್ರಿಕ ತಜ್ಞರಲ್ಲಿ ಒಬ್ಬರು ಕಡ್ಡಾಯವಾಗಿ ಇರಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1504 ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಸಚಿವಾಲಯ

**ವಿಷಯ :** ಸರ್ಕಾರದ ಜನಪರ ಯೋಜನೆಗಳ ಪ್ರಚಾರ ಕಾರ್ಯ ನಿರ್ವಹಿಸಲು ಅರ್ಹ ಜಾಹೀರಾತು ಸಂಸ್ಥೆಗಳ ಆಯ್ಕೆ ಬಗ್ಗೆ – ಸಮಿತಿ ರಚಿಸುವ ಕುರಿತು.

**ಓದಲಾಗಿದೆ :** ನಿರ್ದೇಶಕರು ವಾರ್ತಾ ಇಲಾಖೆ ಇವರ ಪತ್ರ ಸಂಖ್ಯೆ : ವಾಇ:ಅಶಾ/ ಸಜಕಾಪ್ರ/2011–12, ದಿನಾಂಕ : 17–05–2011.

**ಪ್ರಸ್ತಾವನೆ :**

ಸರ್ಕಾರದ ಜನಪರ ಯೋಜನೆಗಳ ಪ್ರಚಾರ ಕಾರ್ಯ ನಿರ್ವಹಿಸಲು ಅರ್ಹ ಜಾಹೀರಾತು ಸಂಸ್ಥೆಗಳ ಆಯ್ಕೆ ಪ್ರಕ್ರಿಯೆಯನ್ನು ಮಾಡುವ ಸಲುವಾಗಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸುವಂತೆ ನಿರ್ದೇಶಕರು, ವಾರ್ತಾ ಇಲಾಖೆ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 28 ವಾಪ್ರಜಾ 2011, ಬೆಂಗಳೂರು, ದಿನಾಂಕ : 13–06–2011.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಸರ್ಕಾರದ ಜನಪರ ಯೋಜನೆಗಳ ಪ್ರಚಾರ ಕಾರ್ಯ ನಿರ್ವಹಿಸಲು ವಾರ್ತಾ ಇಲಾಖೆಯ ಮುಖಾಂತರ ಅರ್ಹ ಜಾಹೀರಾತು ಸಂಸ್ಥೆಗಳ ಆಯ್ಕೆ ಪ್ರಕ್ರಿಯೆಯನ್ನು ಪರಿಶೀಲಿಸುವ ಕುರಿತು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

1. ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ – ಅಧ್ಯಕರು
2. ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಅಥವಾ ಅವರ ಪ್ರತಿನಿಧಿಗಳು – ಸದಸ್ಯರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಅಥವಾ ಅವರ ಪ್ರತಿನಿಧಿಗಳು – ಸದಸ್ಯರು
4. ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು – ಸದಸ್ಯ ಕಾರ್ಯದರ್ಶಿ

ಸಮಿತಿಯ ಉಲ್ಲೇಖ ನಿಬಂಧನೆಗಳನ್ನು (Terms of reference) ಈ ಕೆಳಕಂಡಂತೆ ನಿಗದಿಪಡಿಸಿದೆ.

(ಅ) ರಾಷ್ಟ್ರಮಟ್ಟದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಕಾರಾತ್ಮಕವಾಗಿ ಪ್ರತಿಬಿಂಬಿಸಲು ಅರ್ಹ ಜಾಹೀರಾತು ಸಂಸ್ಥೆಗಳಿಗೆ ಟೆಂಡರ್ ನೀಡುವಾಗ ದಾಖಲೆಗಳನ್ನು ಪರಿಶೀಲಿಸಿ ನೈಪುಣ್ಯತೆಯ ಅರ್ಹ ಸಂಸ್ಥೆಗಳನ್ನು ಆಯ್ಕೆ ಮಾಡುವುದು

(ಆ) ಸರ್ಕಾರದ ಯೋಜನೆಗಳನ್ನು ಸಾರ್ವಜನಿಕರು ಗ್ರಹಿಸಿರುವ ಕುರಿತಂತೆ ಜಾಹೀರಾತು ಏಜೆನ್ಸಿಗಳು ಅಳವಡಿಸಿರುವ ಅಳತೆಗೋಲನ್ನು ವಿಶ್ಲೇಷಿಸುವುದು

(ಇ) ಸಂಸ್ಥೆಗಳು ಕೊಡುವ ಸಲಹೆಗಳು ಫಲಪ್ರದವಾದ ಬಗ್ಗೆ ಮೂರನೇ ವ್ಯಕ್ತಿ/ಸಂಸ್ಥೆಯಿಂದ ಪರಾಮರ್ಶಿಸಲು ಅವಕಾಶ ಕಲ್ಪಿಸುವುದು.

(ಈ) ಸಮಿತಿಯು ಬಯಸುವ ಇತರೆ ಅಂಶಗಳು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಕೃಷ್ಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1505 ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಇಲಾಖೆ

(ವಾರ್ತಾ ಶಾಖೆ)

## ಶಿಕ್ಷಣ ಸಚಿವಾಲಯ
## ತಿದ್ದುಪಡಿ ಆದೇಶ

ಸಂಖ್ಯೆ: ಇಡಿ 225 ಯೋಸಕ 2010, ಬೆಂಗಳೂರು, ದಿನಾಂಕ: 06–06–2011

**ವಿಷಯ** : 2010–11ನೇ ಸಾಲಿಗೆ ರಾಜ್ಯ ವಲಯ ಯೋಜನೇತರ ಅಡಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಕೊಠಡಿಗಳ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ** : ಸರ್ಕಾರಿ ಆದೇಶ ಸಂಖ್ಯೆ ಇಡಿ 225 ಯೋಸಕ 2010 ದಿ: 09–02–2011.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೆಖಿತ ಸರ್ಕಾರಿ ಆದೇಶದ ಅನುಬಂಧ–1ರಲ್ಲಿನ

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಪ್ರೌಢಶಾಲೆಯ ಹೆಸರು | ಕಾಂಪೌಂಡ್ ನಿರ್ಮಾಣ ಚ.ಮೀ. | ಅನುದಾನ ರೂ. ಲಕ್ಷಗಳಲ್ಲಿ |
|---|---|---|---|---|
| 12 | ಉಡುಪಿ | ಸ.ಪ್ರೌ. ಶಾಲೆ ಬಡಾಗ್ರಾಮ ಉಡುಪಿ ತಾಲ್ಲೂಕು<br>ಸ.ಪ್ರೌ. ಶಾಲೆ ಎರಮೊಳಗ್ರಾಮ ಉಡುಪಿ ತಾಲ್ಲೂಕು | 200 ಚ.ಮೀ.<br>150 ಚ.ಮೀ. | 4.60<br>3.50 |

**ಎಂಬುದಕ್ಕೆ ಬದಲಾಗಿ**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಪ್ರೌಢಶಾಲೆಯ ಹೆಸರು | ಕಾಂಪೌಂಡ್ ನಿರ್ಮಾಣ ಚ.ಮೀ. | ಅನುದಾನ ರೂ. ಲಕ್ಷಗಳಲ್ಲಿ |
|---|---|---|---|---|
| 12 | ಉಡುಪಿ | ಸ.ಪ್ರೌ. ಶಾಲೆ ಎರಮೊಳಗ್ರಾಮ ಬಡಾಗ್ರಾಮ ಉಡುಪಿ ತಾಲ್ಲೂಕು<br>ಸ.ಪ್ರೌ. ಶಾಲೆ ಎರಮೊಳು ತೆಂಕ | 200 ಚ.ಮೀ.<br>150 ಚ.ಮೀ. | 4.60<br>3.50 |

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. ನಂ. 1506

## ಇಂಧನ ಸಚಿವಾಲಯ

**ವಿಷಯ** : ಮೆ: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 31.5 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು 35.5 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ** :**1.** ಸರ್ಕಾರಿ ಆದೇಶ ಸಂಖ್ಯೆ ಇಎನ್ 189 ಎನ್‌ಸಿಇ 2009 ದಿನಾಂಕ 11–5–2009 ಮತ್ತು ತಿದ್ದುಪಡಿ ಆದೇಶ ದಿನಾಂಕ 07–11–2009.

**2.** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ವಿಎಸ್‌ಎಲ್/2009/1402, ದಿನಾಂಕ: 17/18.5.2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗದಗ್ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಶಿರನಹಳ್ಳಿ ಮತ್ತು ಗಂಗಾನಗರ ಗ್ರಾಮಗಳಲ್ಲಿ 31.5 ಮೆಗಾ ವ್ಯಾಟ್ (gross) ಮತ್ತು 18.5 ಮೆಗಾ ವ್ಯಾಟ್ (exportable) ಸಾಮರ್ಥ್ಯದ Co-generation ಯೋಜನೆ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು. ತದನಂತರ ದಿನಾಂಕ 07–11–2009ರ ತಿದ್ದುಪಡಿ ಆದೇಶದಲ್ಲಿ ನಿರಕ್ಷೇಪಣಾ ಆದೇಶದ ನಿಬಂಧನೆ 5ನ್ನು ತೆಗೆದು ಹಾಕಲಾಗಿತ್ತು ಹಾಗೂ 31.5 ಮೆಗಾ ವ್ಯಾಟ್ (gross) ಮತ್ತು 23.5 ಮೆಗಾ ವ್ಯಾಟ್ exportable during crushing season and 30.00 ಮೆಗಾ ವ್ಯಾಟ್ expotable during non-crushing season ಎಂದು ತಿದ್ದುಪಡಿ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಮೆ: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಇವರ ಕೋರಿಕೆಯ ಮೇರೆಗೆ 31.5 ಮೆಗಾ ವ್ಯಾಟ್‌ನ 31.5 ಮೆಗಾ ವ್ಯಾಟ್ (gross) ಸಾಮರ್ಥ್ಯವನ್ನು 35.5 ಮೆಗಾವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನಮಾಡಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 234 ಎನ್‌ಸಿಇ 2011, ಬೆಂಗಳೂರು, ದಿನಾಂಕ : 3–06–2011.**

ಮೆ: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗದಗ್ ಜಿಲ್ಲೆಯ ಮಂಡರಗಿ ತಾಲ್ಲೂಕಿನ ಶಿರನಹಳ್ಳಿ ಮತ್ತು ಗಂಗಾನಗರ ಗ್ರಾಮಗಳಲ್ಲಿ 31.5 ಮೆಗಾ ವ್ಯಾಟ್ (gross) ಮತ್ತು 18.5 ಮೆಗಾ ವ್ಯಾಟ್ (exportable) ಸಾಮರ್ಥ್ಯದ Co-generation ಯೋಜನೆ ಸ್ಥಾಪನೆಗೆ ನೀಡಿರುವ ನಿರಾಕ್ಷೇಪಣೆಯನ್ನು 35.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ (gross) ಮತ್ತು 23.5 ಮೆಗಾ ವ್ಯಾಟ್ exportable during crshing season and 30.00 ಮೆಗಾ ವ್ಯಾಟ್ expotable during non-crushing season ಅನುಷ್ಠಾನ ಮಾಡಲು ನಿರಾಕ್ಷೇಪಣೆಯನ್ನು ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಸುರೇಶ್.ಬಿ.ಕೃಷ್ಣಪ್ಪನವರ್)**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

ಪಿ.ಆರ್. 1507

## ENERGY SECRETARIAT

**Sub :** Transfer of 8.00 MW Wind Power Capacity in favour of M/s Tata Power Company Limited –reg.

**Read :** 1. Government Order No. EN 45 NCE 2006 dated : 20-4-2006.

2. Government Order No. EN 167 NCE 2008 dated : 06-10-2008.

3. Letter No. KRED/08/Tata-HWPP (8.00 MW) 2011/1583 dated : 26-5-2011/04-06-2011.

**Preamble:**

In the Government order read at (1) above sanction has been accorded for iimplementation of 8.00 MW wind power capacity in favour of M/s Mysore Mercantile Co. Limited at North and North-West of Hanumasagar town in Koppal District.

In the Government order read at (2) above sanction has been accorded for transfer of entire 8.00 MW wind power capacity of M/s Mysore Mercantile Co. Limited at Hanumasagar, Bilgi, Marenhal of Koppal District in favour M/s Hanumasagar Wind Power Project, Bangalore.

In the letter read at (3) above, the Managing Director, Karnataka Renewable Energy Development Limited, Bangalore has recommended for transfer of entire 8.00 MW Wind Power capacity at Mavinitagi, Bilgi and Chandragiri villages of Hanamsagar Taluk, Koppal District in favour of M/s Tata Power Company Limited.

The proposal has been examined in detail and hence the following Order:-

**Government Order No. : EN 255 NCE 2011, Bangalore, dated 10-06-2011**

Government is pleased to accord approval for transfer of entire 8.00 MW Wind Power capacity Mavinitagi, Bilgi and Chandragiri villages of Hanumasagar Taluk, Koppal District in favour of M/s Tata Power Company Limited as detailed below:-

| Geographical area description of the project |
|---|
| The proposed area consists of two plateaus oriented in NW-SE and North-South direction and is located on the North and North-West of Hanamasagar town. The external features of the area depicts it it a open scrub and covered with boulders as per the SOI map. The area is covered in the following Geographical Co-ordinates:- |
| Latitude: $15^0$ 52' 11"- $15^0$ 54' 53'' N Longitude : $76^0$ 59' 35" – $76^0$ 2' 31" E |
| Ridge Peaks: 701, 707, 662 m Amsl |

| Village Name | Taluk/district | Capacity in MW | Land survey No. | No. of WTG's | Extent in Land (Acres) | Wind generation Location No. |
|---|---|---|---|---|---|---|
| Mavinitagi | Hanumasagar/ | 3.00 | 70/2 | 500 KW x 6 | 2.20 | 1 to 6 Nos. |
| Mavinitagi | Koppal | | 71 | Nos. | 2.20 | |
| Mavinitagi | | | 70/1 | | 2.20 | |
| Mavinitagi | | | 70/1 | | 2.20 | |
| Mavinitagi | | | 70/1 | | 2.20 | |
| Mavinitagi | | | 70/1 | | 2.20 | |
| Bilagi | Hanumasagar/ | 3.5 | 68 | 500 KW x 7 | 2.20 | 7 to 13 Nos. |
| Bilagi | Koppal | | 68 | Nos. | 2.20 | |
| Bilagi | | | 68 | | 2.20 | |
| Bilagi | | | 68 | | 2.20 | |
| Bilagi | | | 68 | | 2.20 | |
| Bilagi | | | 68 | | 2.20 | |
| Bilagi | | | 68 | | 2.20 | |
| Chandragiri | Hanumasagar/ | 1.5 | 03 | 500 KW x 3 | 2.20 | 14 o 16 Nos. |
| Chandragiri | Koppal | | 03 | Nos. | 2.20 | |
| Chandragiri | | | 03 | | 2.20 | |
| | Total | 8.0 | | | 35.2 | |

1. M/s Tata Power Company Limited shall execute an agreement with Government within 45 (forty five) days from the date of issue of this Order.
2. Karnataka Power Transmission Corporation Limited to accord power evacuation and grid synchronization approvals
3. PPA is assigned to HESCOM. HESCOM shall execute the PPA with M/s Tata Power Company Limited.

4. The proposed date of Commissioning should be adhered to December 2012 and no extension should be sought.
5. The Government reserves the right to Cancel/modify this Order.

The terms and conditions of the Government Order read at (1) above shall IPSO FACTO applicable.

By Order and in the name of the Governor of Karnataka

**(Suresh. B. Krishnappanavar)**

Under Secretary to Government

P.R. 1508 Energy Department

## ENERGY SECRETARIAT

**Sub :** Transfer of 3.00 MW Wind Power Capacity in favour of Shri B.M. Farook –reg.

**Read :** 1. Government Order No. EN 316 NCE 2006 dated : 16-10-2006.
2. Letter No. KRED/08/B.M.F.(3.00)-FFHPPL/2011/1586 dated 31-05-2011/04-06-2011.

**Preamble:**

In the Government order read at (1) above sanction has been accorded for Allottment of 62.00 MW. wind power capacity in favour of M/s Fortune Five Hydel Projects (P) Ltd. at Bijapur District.

In the letter read at (2) above, the Managing Director, Karnataka Renewable Energy Development Limited, Bangalore has recommended for transfer of 3.00 MW Wind Power capacity at Basavanahatti, Hanchinal and Karabhantanal villages, Basavanabagewadi Taluk, Bijapur District in favour of Shri B.M. Farook out of 35 MW (part capacity of 62 MW allotted in favour of M/s Fortune Five Hydel Projects (P) Ltd

The proposal has been examined in detail and hence the following Order:-

**Government Order No. : EN 254 NCE 2011, Bangalore, dated 10-06-2011**

Government is pleased to accord approval for transfer of 3.00 MW Wind Power capacity at Basavanahatti, Hanchinal and Karabhantanal villages, Basavanabagewadi Taluk, Bijapur District in favour of Shri B.M. Farookh out of 35 MW (part capacity of 62 MW allotted in faour of M/s M/s Fortune Five Hydel Projects (P) Ltd as detailed below:-

| Village Name | Taluk/district | Capacity in MW | Land survey No. | No. of WTG's | Extent in Land (Acres) | Wind Turbine generator Location No. |
|---|---|---|---|---|---|---|
| Basavanahatti | Basavanabagewadi/Bijapur | 0.50 | 95/B4 | 2 | 4.35 | BM-6,7 |
| Hancinal | | 1.25 | 87/A1 & A/4 | 5 | 6.24 | BM-1,2,3,4&5 |
| Karabhantanal | | 1.25 | 68/1&2 | 5 | 7.38 | BM-8.9.10, 11& 12 |
| | Total | 3.0 | | 12 | 17.97 | |

1. Shri B.M. Farook shall execute an agreement with Government within 45 (forty five) days from the date of issue of this Order.
2. Karnataka Power Transmission Corporation Limited to accord power evacuation and grid synchronization approvals
3. PPA is assigned to HESCOM. HESCOM shall execute the PPA with Shri B.M. Farook .
4. The project should be Commissioned by 2012-13 and no extension should be sought.
5. The Government reserves the right to Cancel/modify this Order.

The terms and conditions of the Government Order read at (1) above shall IPSO FACTO applicable.

By Order and in the name of Governor of Karnataka

**(Suresh. B. Krishnappanavar)**

Under Sceretary to Government

P.R. 1509 Energy Department